KA / BG-GPO / 2515 / WPP-47 / 2006-2008

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೩ | ಬೆಂಗಳೂರು, ಗುರುವಾರ ಸೆಪ್ಟೆಂಬರ್ ೪, ೨೦೦೮ (ಭಾದ್ರಪದ ೧೩, ಶಕ ವರ್ಷ ೧೯೩೦) | ಸಂಚಿಕೆ ೩೬ |
|---|---|---|

## ಭಾಗ – ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ :** ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯಲ್ಲಿ ಕಿರಿಯ ಮಹಿಳಾ ಆರೋಗ್ಯ ಸಹಾಯಕಿಯರ ತರಬೇತಿ ಕೇಂದ್ರಗಳನ್ನು ಚಾಮರಾಜನಗರ, ಉಡುಪಿ, ದಾವಣಗೆರೆ, ಕೊಪ್ಪಳ, ಬಾಗಲಕೋಟೆ ಮತ್ತು ರಾಮನಗರ ಜಿಲ್ಲೆಗಳಲ್ಲಿ ಸ್ಥಾಪಿಸುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರಿ ಆದೇಶ ಸಂ. ಎಚ್‌ಎಫ್‌ಡಬ್ಲ್ಯೂ/ಕೆಎಚ್‌ಎಸ್‌ಡಿಆರ್‌ಪಿ/ಎಸ್‌ಇಸಿಟಿ/55/2007, ದಿನಾಂಕ 29–12–2007.

2. ದಿನಾಂಕ 24–1–08ರಂದು ನಡೆದ 3ನೇ ಕಾರ್ಯಕ್ರಮ ಚಾಲನಾ ಸಮಿತಿಯ ನಡವಳಿಗಳು.

**ಪ್ರಸ್ತಾವನೆ :**

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯಲ್ಲಿ ಮಹಿಳಾ ಆರೋಗ್ಯ ಸಹಾಯಕಿಯರ ಕೊರತೆ ಇರುತ್ತದೆ. ಸದ್ಯಕ್ಕೆ ರಾಜ್ಯದಲ್ಲಿ 19 ಜಿಲ್ಲೆಗಳಲ್ಲಿ ಮಾತ್ರ ಆರೋಗ್ಯ ಸಹಾಯಕಿಯರ ತರಬೇತಿ ಕೇಂದ್ರಗಳು ನಡೆಯುತ್ತಿವೆ. ಈ ನಿಟ್ಟಿನಲ್ಲಿ ಓದಲಾದ (1)ರ ಸರ್ಕಾರಿ ಆದೇಶದಲ್ಲಿ ರಾಜ್ಯದಲ್ಲಿ ಹಿಂದುಳಿದ ಜಿಲ್ಲೆಗಳಾದ ಗದಗ, ಹಾವೇರಿ ಮತ್ತು ಹೊಸದಾಗಿ ಸೃಜಿಸಲಾದ ಚಿಕ್ಕಬಳ್ಳಾಪುರ ಜಿಲ್ಲೆಗಳಲ್ಲಿ ಸರ್ಕಾರಿ ಮಹಿಳಾ ಆರೋಗ್ಯ ಸಹಾಯಕಿಯರ ತರಬೇತಿ ಕೇಂದ್ರಗಳನ್ನು ಸ್ಥಾಪಿಸಲು ಆಡಳಿತಾತ್ಮಕ ಮಂಜೂರಾತಿ ನೀಡಲಾಗಿತ್ತು ಇನ್ನೂ 6 ಜಿಲ್ಲೆಗಳಲ್ಲಿಯೂ ಸಹ ತರಬೇತಿ ಕೇಂದ್ರಗಳ ಅವಶ್ಯಕತೆ ಇರುತ್ತದೆ. ಅಲ್ಲಿಯೂ ಸಹ ಕೇಂದ್ರಗಳನ್ನು ಸ್ಥಾಪಿಸುವ ಸಲುವಾಗಿ ಪ್ರಸ್ತಾವನೆಯನ್ನು ಕಾರ್ಯಕ್ರಮ ಚಾಲನಾ ಸಮಿತಿಯ 3ನೇ ಸಭೆಯಲ್ಲಿ ಮಂಡಿಸಲಾಯಿತು. ಸಭೆಯಲ್ಲಿ ಈ 6 ಜಿಲ್ಲೆಗಳಲ್ಲಿ ಅಂದರೆ ಚಾಮರಾಜನಗರ, ಉಡುಪಿ, ದಾವಣಗೆರೆ, ಕೊಪ್ಪಳ, ಬಾಗಲಕೋಟೆ ಮತ್ತು ರಾಮನಗರ ಜಿಲ್ಲೆಗಳಲ್ಲಿಯೂ ಸಹ ತರಬೇತಿ ಕೇಂದ್ರಗಳನ್ನು ಸ್ಥಾಪಿಸಲು ತೀರ್ಮಾನಿಸಲಾಯಿತು. ಕರ್ನಾಟಕ ಆರೋಗ್ಯ ವ್ಯವಸ್ಥೆ ಅಭಿವೃದ್ಧಿ ಮತ್ತು ಸುಧಾರಣಾ ಯೋಜನೆಯಡಿಯಲ್ಲಿ ಎಎನ್‌ಎಂ ಉಪ ಕೇಂದ್ರಗಳ ಸ್ಥಾಪನೆ/ ರಿಪೇರಿ/ಮಾರ್ಪಾಡು, ಸಿಎಚ್‌ಸಿಗಳ ನಿರ್ವಹಣೆ ಇತ್ಯಾದಿಗಳನ್ನು ತೆಗೆದುಕೊಳ್ಳದೆ ಇದರಲ್ಲಿ ಉಳಿಯುವ ಹಣದಿಂದ ಎಎನ್‌ಎಂ ತರಬೇತಿ ಕೇಂದ್ರಗಳನ್ನು ಸ್ಥಾಪಿಸುವ ಬಗ್ಗೆ ಸಮ್ಮತಿ ನೀಡಲಾಯಿತು. ಇದರ ಬಗ್ಗೆ ವಿಶ್ವಬ್ಯಾಂಕ್ ತನ್ನ ಈ–ಮೇಲ್ ದಿನಾಂಕ 24–1–08ರಲ್ಲಿ ಸಹಮತಿ ನೀಡಿರುತ್ತದೆ.

ಅದರಂತೆ, ಈಗಾಗಲೇ ಮಂಜೂರಾತಿ ನೀಡಿರುವ 3 ತರಬೇತಿ ಕೇಂದ್ರಗಳು ಹಾಗೂ ಈಗ ಪ್ರಸ್ತಾಪಿಸಿರುವ 6 ಕೇಂದ್ರಗಳಿಗೆ ಹುದ್ದೆಗಳನ್ನು ಸಹ ಸೃಜಿಸಬೇಕಾಗಿರುತ್ತದೆ. ಹುದ್ದೆಗಳ ಸೃಜನೆ ಹಾಗೂ ತಗಲುವ ವೆಚ್ಚದ ವಿವರ ಈ ಕೆಳಕಂಡಂತಿದೆ.

| ಕ್ರಮ ಸಂಖ್ಯೆ | ಸಿಬ್ಬಂದಿ ವಿವರ | ಒಟ್ಟು ಹುದ್ದೆಗಳು | ಒಟ್ಟು 9 ಎಎನ್‌ಎಂ ತರಬೇತಿ ಕೇಂದ್ರಗಳಿಗೆ |
|---|---|---|---|
| 1 | ಪ್ರಾಂಶುಪಾಲರು | 1 | 9 |

| ಕ್ರಮ ಸಂಖ್ಯೆ | ಸಿಬ್ಬಂದಿ ವಿವರ | ಒಟ್ಟು ಹುದ್ದೆಗಳು | ಒಟ್ಟು 9 ಎಎನ್‌ಎಂ ತರಬೇತಿ ಕೇಂದ್ರಗಳಿಗೆ |
|---|---|---|---|
| 2 | ಎಲ್‌ಎಚ್‌ವಿ | 2 | 18 |
| 3 | ಪ್ರಾಧ್ಯಾಪಕರು | 3 | 27 |
| 4 | ಪ್ರ.ದ.ಸ./ದ್ವಿ.ದ.ಸ. | 1 | 9 |
| 5 | ಹಿರಿಯ ಆರೋಗ್ಯ ತಪಾಸಕರು | 1 | 9 |
| 6 | ಸ್ವಚ್ಛತಾ ಸಿಬ್ಬಂದಿ ವರ್ಗ | 1 | 9 |
| 7 | ಗ್ರೂಪ್ – ಡಿ ನೌಕರರು | 10 | 90 |
| 8 | ಶುಶ್ರೂಷಕಿ | 1 | 9 |
| | ಒಟ್ಟು | **20** | **180** |

**ಎಎನ್‌ಎಂ ತರಬೇತಿ ಕೇಂದ್ರಗಳ ಸಂಭವನೀಯ ಆರ್ಥಿಕ ನಿರ್ವಹಣಾ ವೆಚ್ಚ**

| ಕ್ರಮ ಸಂಖ್ಯೆ | ವಿವರ | ವೆಚ್ಚ | ಒಟ್ಟು 9 ಎಎನ್‌ಎಂ ತರಬೇತಿ ಕೇಂದ್ರಗಳಿಗೆ ತಗಲುವ ವೆಚ್ಚ | ಷರಾ |
|---|---|---|---|---|
| 1 | ಸಿಬ್ಬಂದಿ ವೆಚ್ಚ – ವೇತನ ಮತ್ತು ಇತರೆ ಭತ್ಯೆ | 20.00 | 180.00 | ಸಂಭವನೀಯ |
| | ಒಟ್ಟು | **20.00** | **180.00** | |

**ಎಎನ್‌ಎಂ ತರಬೇತಿ ಕೇಂದ್ರಗಳ ಅಸಂಭವನೀಯ ಆರ್ಥಿಕ ನಿರ್ವಹಣಾ ವೆಚ್ಚ**

(ರೂ.ಲಕ್ಷಗಳಲ್ಲಿ)

| ಕ್ರಮ ಸಂಖ್ಯೆ | ವಿವರ | ವೆಚ್ಚ | ಒಟ್ಟು 9 ಎಎನ್‌ಎಂ ತರಬೇತಿ ಕೇಂದ್ರಗಳಿಗೆ | ಷರಾ |
|---|---|---|---|---|
| 1 | ತರಬೇತಿ ಕೇಂದ್ರದ ಕಟ್ಟಡ ನಿರ್ಮಾಣ | 175.00 | 1575.00 | ಅಸಂಭವನೀಯ |
| 2 | ಪೀಠೋಪಕರಣಗಳು ಮತ್ತು ಸಾಧನ ಸಾಮಾಗ್ರಿಗಳು | 10.00 | 90.00 | ಅಸಂಭವನೀಯ |
| 3 | ವಾಹನ (ಮಿನಿ ಬಸ್) | 10.00 | 90.00 | ಅಸಂಭವನೀಯ |
| | ಒಟ್ಟು | **195.00** | **1755.00** | |

ಇದರಲ್ಲಿ ನಮೂದಿಸಿರುವ ಅಸಮಭಾವನೀಯ ವೆಚ್ಚ ರೂ. 1755.00 ಲಕ್ಷಗಳನ್ನು ಕರ್ನಾಟಕ ಆರೋಗ್ಯ ವ್ಯವಸ್ಥೆ ಅಭಿವೃದ್ಧಿ ಮತ್ತು ಸುಧಾರಣಾ ಯೋಜನೆಯಡಿಯಲ್ಲಿ ಭರಿಸುವುದು. ರೂ. 180.00 ಲಕ್ಷಗಳ ಸಂಭಾವನೀಯ ವೆಚ್ಚವನ್ನು ರಾಷ್ಟ್ರೀಯ ಗ್ರಾಮೀಣ ಆರೋಗ್ಯ ಅಭಿಯಾನ (NRHM) ಯೋಜನೆಯಡಿಯಲ್ಲಿ ಭರಿಸುವುದು. ನಂತರ ಇದನ್ನು ಯೋಜನೇತರ ಖರ್ಚಿನ ಬಾಬ್ತಿಗೆ ಸ್ಥಳಾಂತರಿಸಬಹುದಾಗಿದೆ.

ಈ ಕೆಳಗಿನಂತೆ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಎಚ್‌ಎಫ್‌ಡಬ್ಲ್ಯೂ/ಕೆಎಚ್‌ಎಸ್‌ಡಿಆರ್‌ಪಿ/ಎಸ್‌ಇಸಿಟಿ/55/2007, ಬೆಂಗಳೂರು, ದಿನಾಂಕ: 13ನೇ ಫೆಬ್ರವರಿ 2008.**

ಮೇಲೆ ವಿವರಿಸಿರುವ ಪ್ರಸ್ತಾವನೆಯ ಹಿನ್ನೆಲೆಯಲ್ಲಿ ರಾಜ್ಯದ ಚಾಮರಾಜನಗರ, ಉಡುಪಿ, ದಾವಣಗೆರೆ, ಕೊಪ್ಪಳ, ಬಾಗಲಕೋಟೆ ಮತ್ತು ರಾಮನಗರ ಜಿಲ್ಲೆಗಳಲ್ಲಿ 6 ಮಹಿಳಾ ಆರೋಗ್ಯ ಸಹಾಯಕಿಯರ ತರಬೇತಿ ಕೇಂದ್ರಗಳನ್ನು ಸರ್ಕಾರವು ಈ ಕೂಡಲೇ ಮಂಜೂರು ಮಾಡಿದೆ. ಇವುಗಳ ಜೊತೆಗೆ ಈ ಹಿಂದೆ ಮಂಜೂರು ಮಾಡಲಾದ ಗದಗ, ಹಾವೇರಿ ಮತ್ತು ಚಿಕ್ಕಬಳ್ಳಾಪುರ ಜಿಲ್ಲೆಗಳ ತರಬೇತಿ ಕೇಂದ್ರಗಳಿಗೆ, ಅಂದರೆ ಒಟ್ಟು 9 ತರಬೇತಿ ಕೇಂದ್ರಗಳಿಗೆ ಬೇಕಾಗುವ ಒಟ್ಟು 180 ಹುದ್ದೆಗಳನ್ನು ಹಾಗೂ ಅದಕ್ಕೆ ತಗಲುವ ವೆಚ್ಚವನ್ನು ಸಹ ಮಂಜೂರು ಮಾಡಲಾಗಿದೆ. ಸದ್ಯಕ್ಕೆ ಸಂಭಾವನೀಯ ವೆಚ್ಚವನ್ನು ಎನ್‌ಆರ್‌ಎಚ್‌ಎಂ ಅನುದಾನದ ಅಡಿಯಲ್ಲಿ ಹಾಗೂ ಅಸಂಭಾವನೀಯ ವೆಚ್ಚವನ್ನು ಕೆಎಚ್‌ಎಸ್‌ಡಿಆರ್‌ಪಿ ಅಡಿಯಲ್ಲಿ ಭರಿಸುವುದು. ನಂತರ ಸದರಿ ವೆಚ್ಚಗಳನ್ನು ಯೋಜನೇತರ ಖರ್ಚಿನ ಬಾಬ್ತಿಗೆ ಸ್ಥಳಾಂತರಿಸುವುದು.

| ಕ್ರಮ ಸಂಖ್ಯೆ | ಸಿಬ್ಬಂದಿ ವಿವರ | ಒಟ್ಟು ಹುದ್ದೆಗಳು | ಒಟ್ಟು 9 ಎಎನ್‌ಎಂ ತರಬೇತಿ ಕೇಂದ್ರಗಳಿಗೆ |
|---|---|---|---|
| 1 | ಪ್ರಾಂಶುಪಾಲರು | 1 | 9 |
| 2 | ಎಲ್‌ಎಚ್‌ವಿ | 2 | 18 |

| ಕ್ರಮ ಸಂಖ್ಯೆ | ಸಿಬ್ಬಂದಿ ವಿವರ | ಒಟ್ಟು ಹುದ್ದೆಗಳು | ಒಟ್ಟು 9 ಎಎನ್‌ಎಂ ತರಬೇತಿ ಕೇಂದ್ರಗಳಿಗೆ |
|---|---|---|---|
| 3 | ಪ್ರಾಧ್ಯಾಪಕರು | 3 | 27 |
| 4 | ಪ್ರ.ದ.ಸ./ದ್ವಿ.ದ.ಸ. | 1 | 9 |
| 5 | ಹಿರಿಯ ಆರೋಗ್ಯ ತಪಾಸಕರು | 1 | 9 |
| 6 | ಸ್ವಚ್ಛತಾ ಸಿಬ್ಬಂದಿ ವರ್ಗ | 1 | 9 |
| 7 | ಗ್ರೂಪ್ –ಡಿ ನೌಕರರು | 10 | 90 |
| 8 | ಶುಶ್ರೂಷಕಿ | 1 | 9 |
| | **ಒಟ್ಟು** | **20** | **180** |

**ಎಎನ್‌ಎಂ ತರಬೇತಿ ಕೇಂದ್ರಗಳ ಸಂಭವನೀಯ ಆರ್ಥಿಕ ನಿರ್ವಹಣಾ ವೆಚ್ಚ**

(ರೂ. ಲಕ್ಷಗಳಲ್ಲಿ)

| ಕ್ರಮ ಸಂಖ್ಯೆ | ವಿವರ | ವೆಚ್ಚ | ಒಟ್ಟು 9 ಎಎನ್‌ಎಂ ತರಬೇತಿ ಕೇಂದ್ರಗಳಿಗೆ | ಷರಾ |
|---|---|---|---|---|
| 1 | ಸಿಬ್ಬಂದಿ ವೆಚ್ಚ – ವೇತನ ಮತ್ತು ಇತರೆ ಭತ್ಯೆ | 20.00 | 180.00 | ಸಂಭವನೀಯ |
| | **ಒಟ್ಟು** | **20.00** | **180.00** | |

**ಎಎನ್‌ಎಂ ತರಬೇತಿ ಕೇಂದ್ರಗಳ ಅಸಂಭವನೀಯ ಆರ್ಥಿಕ ನಿರ್ವಹಣಾ ವೆಚ್ಚ**

(ರೂ.ಲಕ್ಷಗಳಲ್ಲಿ)

| ಕ್ರಮ ಸಂಖ್ಯೆ | ವಿವರ | ವೆಚ್ಚ | ಒಟ್ಟು 9 ಎಎನ್‌ಎಂ ತರಬೇತಿ ಕೇಂದ್ರಗಳಿಗೆ | ಷರಾ |
|---|---|---|---|---|
| 1 | ತರಬೇತಿ ಕೇಂದ್ರದ ಕಟ್ಟಡ ನಿರ್ಮಾಣ | 175.00 | 1575.00 | ಅಸಂಭವನೀಯ |
| 2 | ಪೀಠೋಪಕರಣಗಳು ಮತ್ತು ಸಾಧನ ಸಾಮಾಗ್ರಿಗಳು | 10.00 | 90.00 | ಅಸಂಭವನೀಯ |
| 3 | ವಾಹನ (ಮಿನಿ ಬಸ್) | 10.00 | 90.00 | ಅಸಂಭವನೀಯ |
| | **ಒಟ್ಟು** | **195.00** | **1755.00** | |

ಪಿ.ಆರ್. 377

ಭಾರತದ ರಾಷ್ಟ್ರಪತಿಗಳ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಸುಷಮಾ ಗೋಡಬೋಲೆ**
ಸರ್ಕಾರದ ಉಪ ಕಾರ್ಯದರ್ಶಿ,
ಕೆಎಚ್‌ಎಸ್‌ಡಿಆರ್‌ಪಿ
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ

**HEALTH AND FAMILY WELFARE SECRETARIAT**

**Sub :** Deputation of officers by Karnataka Health System Development and Reform Project for the FEEL Institutional Leadership Course – reg.

**Preamble:**

Aim INSIGHTS, Mangalore is conducting the FEEL Institutional Leadership Course from 6-5-2008 to 11-5-2008 at its office, in Mangalore. The Course aims at developing the participants insight into different aspects of human resource, leadership, communication etc. The Course will enable officers of the department to effectively harness and manage human resource, especially officers at the field level. This is part of the capacity building activity under Organisation Development component of KHSDRP.

It is hence considered to nominate 40 senior officers of Health and Family Welfare Services for the said course. The officers include District Health & Family Welfare Officers, District Programme Officers and State Programme Officers. The course fee of Rs. 7,200/- (inclusive of course fee and refreshments) plus Rs. 125/- towards accommodation, per person need to be paid to the Institute, which amounts to a total of Rs. 3,18,000/- only for 40 participants.

Hence the following order.

**Govt. Order No. HFW/KHSDRP/OD/21/2007-08, Bangalore, Dated 5th May 2008**

Under the circumstances mentioned in the preamble, Government are pleased to depute the following officers of Health & Family Welfare Services for the FEEL Institutional Leadership Course at AIM INSIGHTS, 'Senate' Corporate Office, 1st Floor, Sharmol Mansion, Valenica Circle, Mangalore-575002 from 6-5-2008 to 11-5-2008.

| Sl. No. | District | Name of the Participant with Desinagtion | |
|---|---|---|---|
| | | District Health & Family Welfare Officer | Programme Officer |
| 1 | Bangalore Urban | 1. Dr. B.T. Shivaram | 1. Dr. Subhashini Gowda, DMO |
| 2 | Bangalore Rural | 2. Dr. Channamallaiah | 2. Dr. Muniraju, DLO |
| 3 | Davanagere | | 3. Dr. Raghavan, DTO<br>4. Dr. Munnavar Hussain, RCH |
| 4 | Kolar | | 5. Dr. K.S. Prakash, DTO<br>6. Dr. Narayanswamy, DMO |
| 5 | Chikkabalapura | | 7. Dr. Chowdappa, DTO<br>8. Dr. Anil Kumar, MO, PHC, Gangigunte |
| 6 | Shimoga | 3. Dr. Siddesh | 9. Dr. Raghunandan, DTO |
| 7 | Tumkur | | 10. Dr. Rangaswamy, DTO<br>11. Dr. Krishna, DSO |
| 8 | Bidar | | 12. Dr. Kashampurkar, DTO<br>13. Dr. Sharannaiah Swamy, RCHO |
| 9 | Dakshina Kannada | 4. Dr. Jaganath | 14. Dr. Ramachandra Rao DTO<br>15. Dr. Hemalatha Suratkal PHC Mangalore (T).<br>16. Dr. Vishweshwar Bat Peruvai<br>17. Dr. Rajesh IDSP |
| 10 | Gulbarga | 5. Dr. Nalini Namoshi | 18. Dr. Shamrao Patil, RCH<br>19. Dr. Sulochana, DMO |
| 11 | Hassan | | 20. Dr. Narayan, RCHO<br>21. Dr. Raja Gopal, DSO |
| 12 | Raichur | | 22. Dr. M.K. Nazeer, DLO Raichur,<br>23. Dr. Narayanappa, DTO Raichur |
| 13 | Ramanagara | | 24. Dr. Srinivas K.M. DMO<br>25. Dr. V.C. Murhty, DLO, DHO<br>26. Dr. Raghuramaiah, PHC, Bidadi<br>27. Dr. Raghuveer, PHC Byramanagala<br>28. Dr. Krishnappa PHC Dommaladoddi |
| 14 | Mysore | 6. Dr. Raju V | |
| 15 | Udupi | 7. Dr. M.R. Naik | 29. Dr. Ramachandra Beiry, DTO<br>30. Dr. Rohini, DSO |
| 16 | Bellary | | 31. Dr. Abdulla, RCHO |
| 17 | Bangalore State Officers | 8. Dr. Kemparaj DD (Procurement), KHSDRP<br>9. Dr. Shankarappa DD (SIHFW).<br>10. Dr. Selvaraj DD (Training), SIHFW<br>11. Dr. Suresh Shapeti DD (Planning) | |

The total expenditure of Rs. 3,18,000/- (Rupees three lakhs eighteen thousand) only including course fee and accommodation shall be borne by KHSDRP under its Head of Account "2210-06-800-0-84-051 (General Expenses)" during the year 2008-09.

Officers shall share the knowledge gained, on their return with other colleagues of the Department.

They shall claim TA/DA as per KCSRs only.

By order and in the name of the President of India,

PR. 757

**SUSHAMA GODBOLE**

Deputy Secretary to Government,

KHSDRP

Department of Health and Family Welfare

**Sub :** Merger of Karnataka Health System Development and Reform Project and the National Rural Health Mission at district level – reg.

**Preamble:**

The National Rural Health Mission of the Government of India and the World Bank assisted Karnataka Health System Development and Reform Project were launched in April 2005 and December 2006 respectively and will be operational till 2012. These are time bound programmes and need to be implemented throughout the State with special emphasis to under-served areas and vulnerable groups.

The main objective of NRHM is towards universal health care and reduction of IMR, MMR, and TFR and that of KHSDRP is to increase utilisation of essential health services (curative, preventive and public health) so as to accelerate achievement of the health related Millennium Development Health goals. Both KHSDRP and NRHM are working to towards achievement of same goals in the same time frame. NRHM will encourgae community participation, flexible financing, improved management through capacity building, innovation and human resource management, etc. The KHSDRP seeks to strenghen the existing health related programmes of Government, innovation in service delivery, health financing, project management etc. Both these programmes ultimately aim at making health services accessible to every person in the State and also improve the existing health service delivery systems. Presently, the district level RCH Officer implements the NRHM and District Project Management Officer (DPMO) implements KHSDRP at district level. The success of both these programmes depends on effective co-ordination between the field officers and other programme officers of the department. The progress and timely achievements of the State goals need to be effectively nomitored and supervised by the district level Health and Family Welfare officer.

Under NRHM, the district RCH Officer is assistaed by the District Project Manager, Accounts Assistants and Data Entry Assistants who are employed on contractual basis. The DPMO is assisted by the Office Superintendent, FDA (drawn from Government) and a typist and Group-D (through outsourcing). Both the DPMO and the DPM are provided with a vehicle with driver through outsourcing. Since both programmes need to be implemented in a coordinated way, it is proposed to merge the two units at the district level. The office staff presently working for NRHM and KHSDRP will render services in both NRHM and KHSDRP. The DPMO shall implement both KHSDRP and NRHM under the stewardship of District Health and Family Welfare Officer. The DPM and this supporting staff shall work under the DPMO.

**Govt. Order No. HFW/KHSDRP/Sect/Merge-1/2007-08, Bangalore, Dated 18th February 2008**

Under the circumstances mentioned in the preamble, Government are pleased to functionally merge the Karnataka Health System Development and Reform Project and the National Rural Health Mission with immediate effect. The District Project Management Officer (DPMO) of KHSDRP shall implement both the KHSDRP and NRHM programmes under the stewardship of the District Health and Family Welfare Officer (DHFWO). The DPM and his supporting contractual staff shall work under the DPMO. The District Programme Management Unit (DPMU) for NRHM and KHSDRP shall therefore, consist of the following:

| | | |
|---|---|---|
| 1) DHFWO, Team Leader | 2) DPMO | 3) DPM |
| 4) Office Superintendent | 5) FDA | 6) Typist |
| 7) Accounts Assistant | 8) Data Entry Assistant | 9) Group D |

The DPMU shall aslo use 2 vehicles with drivers through outsourcing. The DPMO shall be the controlling officer for Sl. No. 3 to 9. The DPMO shall implement both KHSDRP and NRHM as per the respective guidelines, and shall be the programme Officer for the NRHM additionalities.

The Programme Officers in the district like, RCHO, DTO, DLO, DMO, DSO, etc., shall be the District Programme Officers of theird respective line programmes reporting directly to DHFWO for all decisions. However, the DPMU shall act as the integrated HMIS Unit of all the programmes.

The DPMU shall also act as the Secretariat of the District Health Mission and the District Health Society and the DPMO will be the member secretary for the District Health Society.

The salaries/contractual payment for Sl.No. 3, 7 and 8 and the vehicle will be met out of the NRHM Programme.

The salaries/contractual payments for Sl.No. 2,4,5,6 and 9 and another vehicle shall be met out of the KHSDRP.

By order and in the name of the President of India,

PR. 373

**SUSHAMA GODBOLE**

Deputy Secretary to Government,

Department of Health and Family Welfare

**Preamble:**

Karnataka Health System Development & Reform Project (KHSDRP) is a World Bank assisted Project being implemented at a cost of Rs. 897.77 crores over a period of 5 years till 31-3-2012. The Project has two components namely, Project Financing and Programmatic Financing. While under the Program Finance component, assistance from the Bank is available for the identified ongoing programs of the Health & Family Welfare Dept. on an incremental expenditure concept with 2003-04 as the Base Year, Project Financing with a total outlay of Rs. 419.49 crores has specific components to be implemented. The state Project Monitoring Unit (PMU) oversees and monitors the Project activities and their implementation. A District Project Management Unit (DPMU) has been set up in each District for district level project implementation. It is headed by the District Project Management Officer (DMPU).

KHSDRP has adopted mainstream Government accounting and expenditure under Project Financing components is met through budgetary allocations by the Govt. of Karnataka. All the payments under the Project are through the Treasury. DPMOs have already been designated as Drawing & Disbursing Officers (DDOs) for purposes of drawing salary, telephone & electricity bills. DPMOs and other staff at the DPMUs need to undertake tours frequently within their jurisdiction for implementation of the Project components, in respect of all other payments including travel expenditure, DC bills drawn by the DPMOs have to be submitted to the Chief Finance Officer (CFO), of the Project for countersignature and thereafter, countersigned bills have to be presented at the respective District Treasury for payment.

The present practice of submitting DC bills including travelilng allowance claims by all the DPMOs to this office for countersignature by the CFO and subsequent processing of the same and return of the countersigned bills to the DPMOs takes time. Since the work in the Project is time bound in nature and works have to be implemented on schedule, it is considered to decentralise the existing elaborate procedure.

Hence, the following order.

**Govt. Order No. HFW/KHSDRP/Sect/63/2007, Bangalore, Dated 13th March 2008**

Government are therefore pleased to designate the District Health and Family Welfare Officer as the 'countersigning authority' for the DC Bills and TA bills of the District Project Management Officers (DPMOs) of KHSDRP in the interest of speedy and effective project implementation. This order comes into immediate effect, subject to the following.

(i) TA for the month of January 2008 & onwards shall only be countersigned including pending bills, if any which has not already been submitted to SPMU;
(ii) All TA bills submitted to SPMU before 12-3-2008 and pending at SPMU shall be processed by SPMU;
(iii) TA bill shall be accompanied by tour programme and tour diary approval of the concerned functional Dy. Director at SPMU;
(iv) Expenditure on tours and travels shall be regulated within the budget allocation issued to each district by the SPMU;
(v) Expenditure under all other DC bill heads shall be regulated within the budget allocation communicated by the SPMU under each expenditure head.

By order and in the name of the President of India,

PR. 451

**SUSHAMA GODBOLE**
Deputy Secretary to Government,
Department of Health and Family Welfare

**PERSONNEL AND ADMINISTRATIVE REFORMS SECRETARIAT**

**Sub :** Change of Home Town by Sri Jag Mohan Sharma, IFS – Issue of orders – reg.

**Read :** 1. Letter No. GM/IFS/253-54, dated 17-6-2005 of the Accountant General, Karnataka, Bangalore.
2. Letter No. JLR/ED/P&BD/2007-08/ 761, dated 4-12-2007 of Sri Jag Mohan Sharma, IFS.

**Preamble:**

In the letter dated 17-6-2005 read at Sl.No. (1) above, the Accountant General has requested to intimate as to whether Sri Jag Mohan Sharma, IFS has changed his Home Town from "Delhi" to "Puri-Garhwal Dist" Uttaranchal, as the officer had declared "Delhi" as his Home Town earlier. In response to the clarification sought by Government in letter dt: 3-11-2005, the officer in his letter dt: 4-12-2007 read at Sl.No. (2) above has stated that at the time of entry in to service, his parents were staying at Delhi & hence the "Home Town" was declared as "Delhi". However, as his parents are a native of District Pauri-Garhwal in the state of Uttaranchal and hold ancestral property and house, he has requested for nofitying his Home Town as Pauri Garhwal instead of Delhi.

The proposal has been examined and Government has decided to allow the officer to change his declaration of Home Town from Delhi to Pauri-Garhwal for HTC purpose with prospective effect. Hence the following orders.

**Govt. Order No. DPAR 161 SFP 2005, Bangalore, Dated 3rd June 2008**

In view of the reasons explained in the preamble, permission is accorded to Sri Jag Mohan Sharma, IFS (KN 90) to change his declaration of Home Town from the present "Delhi" to "Dist Pauri-Garhwal – Uttaranchal" for HTC purpose with prospective effect. The change in HTC declaration applies for the current block and onwards as per the provisions for change of Home Town once in service.

By order and in the name of the Governor of Karnataka,

PR. 898

**ASHOK P. ATRE**
Under Secretary to Government,
DP & AR (Services-IV).

**ಕಂದಾಯ ಸಚಿವಾಲಯ**

**ವಿಷಯ :** ಚಿಕ್ಕಮಗಳೂರು ತಾಲ್ಲೂಕು ಅರಳಗುಪ್ಪೆ ಗ್ರಾಮದ ಸರ್ವೆ ನಂ. 292 ರಲ್ಲಿ 34.36 ಎಕರೆ ಜಮೀನು ಎನ್.ಎಂ.ಡಿ.ಸಿ. ಯವರಿಗೆ ಗುತ್ತಿಗೆ ನೀಡಿರುವುದನ್ನು ರದ್ದುಪಡಿಸಿ ಶ್ರೀ ಆದಿಚುಂಚನಗಿರಿ ಶಿಕ್ಷಣ ಸಂಸ್ಥೆಗೆ ಮಂಜೂರು ಮಾಡುವ ಕುರಿತು.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 214 ಎಲ್‌ಜಿಯು 80, ದಿನಾಂಕ 27–5–1982.
2. ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 214 ಎಲ್‌ಜಿಯು 87, ದಿನಾಂಕ 17–6–1989.

3. ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 18 ಎಲ್‌ಜಿಯು 94(ಭಾ) ದಿನಾಂಕ 7–6–2000.
4. ಜಿಲ್ಲಾಧಿಕಾರಿಗಳು, ಚಿಕ್ಕಮಗಳೂರು ರವರ ಪತ್ರ ಸಂಖ್ಯೆ: ಎಂ4 ಎಲ್‌ಎನ್‌ಡಿ, ಸಿಆರ್ 284/93–94, ದಿನಾಂಕ 9–3–2007.

**ಪ್ರಸ್ತಾವನೆ :**

ಮೇಲಿನ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ದಿನಾಂಕ 27–5–1982 ಸರ್ಕಾರದ ಆದೇಶದಲ್ಲಿ ಚಿಕ್ಕಮಗಳೂರು ತಾಲ್ಲೂಕು ಅರಳಗುಪ್ಪೆ ಗ್ರಾಮದ ಸರ್ವೆ ನಂಬರ್ 292ರಲ್ಲಿ 34.36 ಎಕರೆ ಜಮೀನನ್ನು ಎಕರೆ ಒಂದಕ್ಕೆ ವಾರ್ಷಿಕ ರೂ. 100/– ರಂತೆ ಲೀಜ್ ದರ ನಿಗದಿಪಡಿಸಿ ನ್ಯಾಷನಲ್ ಮಿನರಲ್ ಡೆವಲಪ್‌ಮೆಂಟ್ ಕಾರ್ಪೋರೇಷನ್ ಲಿಮಿಟೆಡ್ ರವರಿಗೆ ಕೃಷಿ ರಹಿತ ಉದ್ದೇಶಕ್ಕಾಗಿ ದಿನಾಂಕ 4–2–81ರಿಂದ ಜಾರಿಗೆ ಬರುವಂತೆ ಕೆಲವೊಂದು ಷರತ್ತಿಗೊಳಪಟ್ಟು 25 ವರ್ಷಗಳ ಅವಧಿಗೆ ಗುತ್ತಿಗೆ ಆಧಾರದ ಮೇಲೆ ಮಂಜೂರು ಮಾಡಿ ಆದೇಶಿಸಲಾಗಿದೆ.

ಮೇಲಿನ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ದಿನಾಂಕ 17–6–1989ರ ಆದೇಶದಲ್ಲಿ ಎನ್.ಎಂ.ಡಿ.ಸಿ. ಲಿಮಿಟೆಡ್‌ರವರಿಗೆ ಗುತ್ತಿಗೆ ಆಧಾರದ ಮೇಲೆ ಮಂಜೂರು ಮಾಡಲಾದ ಚಿಕ್ಕಮಗಳೂರು ತಾಲ್ಲೂಕು ಅರಳಗುಪ್ಪೆ ಗ್ರಾಮದ ಸರ್ವೆ ನಂ. 292ರಲ್ಲಿನ 34.36 ಎಕರೆ ಜಮೀನನ್ನು ಸದರಿ ಸಂಸ್ಥೆಯವರು ಪೂರ್ಣ ಪ್ರಮಾಣದಲ್ಲಿ ಜಮೀನು ಮಂಜೂರು ಮಾಡಲಾದ ಉದ್ದೇಶಕ್ಕೆ ಉಪಯೋಗಿಸಿಕೊಳ್ಳದೇ ಇರುವುದರಿಂದ, ಈ ಸಂಸ್ಥೆಯವರ ಸಹಮತಿಯ ಮೇರೆಗೆ ಸದರಿ ಜಮೀನನ್ನು ಮೈನಿಂಗ್ ಇಂಜಿನಿಯರಿಂಗ್ ಹಾಗೂ ಪಾಲಿಟೆಕ್ನಿಕ್ ಕಾಲೇಜುಗಳ ಸ್ಥಾಪನೆಗಾಗಿ ಎಕರೆ ಒಂದಕ್ಕೆ ವಾರ್ಷಿಕ ರೂ. 300/– ಭೂ ಬಾಡಿಗೆ ದರ ನಿಗಧಿ ಪಡಿಸಿ ಶ್ರೀ ಆದಿ ಚುಂಚನಗಿರಿ ಶಿಕ್ಷಣ ಟ್ರಸ್ಟ್ (ರಿ) ಚಿಕ್ಕಮಗಳೂರು ರವರಿಗೆ ಉಪ ಗುತ್ತಿಗೆ ಆಧಾರದ ಮೇಲೆ ಮಂಜೂರು ಮಾಡಿ ಆದೇಶಿಸಲಾಗಿದೆ.

ತದನಂತರ ಎನ್.ಎಂ.ಡಿ.ಸಿ. ಲಿಮಿಟೆಡ್‌ರವರಿಗೆ ದಿನಾಂಕ 27–5–82ರಲ್ಲಿ ಗುತ್ತಿಗೆ ಆಧಾರದ ಮೇಲೆ ಮಂಜೂರು ಮಾಡಿರುವುದನ್ನು ಹಾಗೂ ದಿನಾಂಕ 17–6–89ರಲ್ಲಿ ಶ್ರೀ ಆದಿಚುಂಚನಗಿರಿ ಶಿಕ್ಷಣ ಟ್ರಸ್ಟ್ (ರಿ) ಚಿಕ್ಕಮಗಳೂರು ರವರಿಗೆ ಉಪಗುತ್ತಿಗೆ ಆಧಾರದ ಮೇಲೆ ಮಂಜೂರು ಮಾಡಲಾದ ಚಿಕ್ಕಮಗಳೂರು ತಾಲ್ಲೂಕು, ಅರಳಗುಪ್ಪೆ ಗ್ರಾಮದ ಸಂ. 292ರಲ್ಲಿ 34.36 ಎಕರೆ ಜಮೀನನ್ನು ಸದರಿ ಸಂಸ್ಥೆಯವರು ಜಮೀನು ಮಂಜೂರು ಮಾಡಲಾದ ಉದ್ದೇಶಕ್ಕೆ ಬಳಸಿಕೊಳ್ಳದೇ ಮಂಜೂರಾತಿ ಷರತ್ತನ್ನು ಉಲ್ಲಂಘಿಸಿರುವುದರಿಂದ ಮೇಲೆ ಓದಲಾದ ಕ್ರಮ ಸಂಖ್ಯೆ (3)ರ ಆದೇಶದಲ್ಲಿ ಸದರಿ ಸಂಸ್ಥೆಯವರಿಗೆ ಮಂಜೂರು ಮಾಡಲಾದ ಜಮೀನಿನ ಮಂಜೂರಾತಿಯನ್ನು ರದ್ದುಪಡಿಸಿ ಆದೇಶಿಸಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (3)ರಲ್ಲಿನ ದಿನಾಂಕ 7–6–2000ರ ಆದೇಶವನ್ನು ಎನ್.ಎಂ.ಡಿ.ಸಿ. ಲಿಮಿಟೆಡ್‌ರವರು ರಿಟ್ ಅರ್ಜಿ ಸಂಖ್ಯೆ 22515/2000ರಂತೆ ಹಾಗೂ ಶ್ರೀ ಆದಿ ಚುಂಚನಗಿರಿ ಶಿಕ್ಷಣ ಟ್ರಸ್ಟ್ (ರಿ) ರವರು ರಿಟ್ ಅರ್ಜಿ ಸಂಖ್ಯೆ: 30561/2000ರಂತೆ ಕರ್ನಾಟಕ ಉಚ್ಚ ನ್ಯಾಯಾಲಯದಲ್ಲಿ ಪ್ರಶ್ನಿಸಿರುತ್ತಾರೆ. ರಾಜ್ಯ ಉಚ್ಚ ನ್ಯಾಯಾಲಯವು ರಿಟ್ ಅರ್ಜಿ ಸಂಖ್ಯೆ: 22515/2000ಕ್ಕೆ ದಿನಾಂಕ 31–3–2005ರಂದು ನೀಡಿರುವ ತೀರ್ಪಿನಲ್ಲಿ ಎನ್.ಎಂ.ಡಿ.ಸಿ. ಇವರು ಸಲ್ಲಸಿದ್ದ ರಿಟ್ ಅರ್ಜಿಯನ್ನು ವಜಾಗೊಳಿಸಿ ಆದೇಸಿಸಿರುತ್ತದೆ ಹಾಗೂ ರಿಟ್ ಅರ್ಜಿ ಸಂಖ್ಯೆ 30561/2000ಕ್ಕೆ ದಿನಾಂಕ 31–3–2005ರಂದು ತೀರ್ಪು ನೀಡಿ ಈ ಕೆಳಕಂಡಂತೆ ನಿರ್ದೇಶನ ನೀಡಿರುತ್ತದೆ.

> "The writ petition is allowed. Annexure-E, dtd: 7-6-2000 passed by the State Government is hereby quashed. The matter is remitted back to the State Government. If they so desire to proceed with the matter, the State Government shall do the same by giving reasonable opportunity for the petitioner-trust and the matter may be decided on merits."

ಜಿಲ್ಲಾಧಿಕಾರಿಗಳು, ಚಿಕ್ಕಮಗಳೂರು ಜಿಲ್ಲೆ ಇವರು ಮೇಲೆ ಓದಲಾದ ಕ್ರಮ ಸಂಖ್ಯೆ (4)ರಲ್ಲಿನ ಪತ್ರದಲ್ಲಿ ಶ್ರೀ ಆದಿಚುಂಚನಗಿರಿ ಶಿಕ್ಷಣ ಸಂಸ್ಥೆಗೆ ಉಪಗುತ್ತಿಗೆ ಆಧಾರದ ಮೇಲೆ ಮಂಜೂರು ಮಾಡಲಾದ ಜಮೀನು ಚಿಕ್ಕಮಗಳೂರು ನಗರ ಪ್ರದೇಶದ ವ್ಯಾಪ್ತಿಯಿಂದ 10 ಕಿ.ಮೀ. ದೂರದಲ್ಲಿರುತ್ತದೆ. ಸದರಿ ಸಂಸ್ಥೆಯವರು ಈ ಜಮೀನನ್ನು ಉಪ ಗುತ್ತಿಗೆ ಪಡೆದ ಲಾಗಾಯ್ತುನಿಂದಲೂ ಸ್ವಾಧೀನದಲ್ಲಿದ್ದು, ಆಯಾ ವರ್ಷದ ಗುತ್ತಿಗೆ ಹಣವನ್ನು ಸರ್ಕಾರಕ್ಕೆ ಪಾವತಿಸಿಕೊಂಡು ಬಂದಿರುತ್ತಾರೆಂದು ತಿಳಿಸಿ ರಾಜ್ಯ ಉಚ್ಚ ನ್ಯಾಯಾಲಯದ ಆದೇಶದ ಮೇರೆಗೆ ಶ್ರೀ ಆದಿಚುಂಚನಗಿರಿ ಟ್ರಸ್ಟ್ (ರಿ) ಇವರಿಗೆ ಪಾಲಿಟೆಕ್ನಿಕ್ ಸ್ಥಾಪನೆಯ ವ್ಯವಸಾಯೇತರ ಉದ್ದೇಶಕ್ಕಾಗಿ ಜಮೀನು ಮಂಜೂರು ಮಾಡುವ ಬಗ್ಗೆ ಸರ್ಕಾರದ ಆದೇಶ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಲಾಗಿದೆ. ಅದರಂತೆ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 74 ಎಲ್‌ಜಿಯು 2007, ಬೆಂಗಳೂರು, ದಿನಾಂಕ: 29ನೇ ಮೇ 2008.**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳಿಂದಾಗಿ ಶ್ರೀ ಆದಿ ಚುಂಚನಗಿರಿ ಶಿಕ್ಷಣ ಟ್ರಸ್ಟ್ (ರಿ) ಚಿಕ್ಕಮಗಳೂರುರವರಿಗೆ ಚಿಕ್ಕಮಗಳೂರು ತಾಲ್ಲೂಕು, ಅರಳಗುಪ್ಪೆ ಗ್ರಾಮದ ಸರ್ವೆ ನಂ. 292ರಲ್ಲಿ 34.36 ಎಕರೆ ಜಮೀನನ್ನು ಕರ್ನಾಟಕ ಭೂ

ಮಂಜೂರಾತಿ ನಿಯಮಾವಳಿ 1969ರ ನಿಯಮ 21ರಡಿ ಪ್ರಚಲಿತ ಮಾರುಕಟ್ಟೆ ದರ ಎಕರೆ ಒಂದಕ್ಕೆ ರೂ. 50,000/– (ಐವತ್ತು ಸಾವಿರ ರೂಪಾಯಿಗಳು ಮಾತ್ರ) ಹಾಗೂ ನಿಯಮಾನುಸಾರ ಇತರೆ ಶುಲ್ಕಗಳನ್ನು ವಿಧಿಸಿ ಮಂಜೂರು ಮಾಡಿ ಆದೇಶಿಸಲಾಗಿದೆ. ಅದರಂತೆ ಮುಂದಿನ ಕ್ರಮ ಕೈಗೊಳ್ಳಲು ಜಿಲ್ಲಾಧಿಕಾರಿಗಳು ಚಿಕ್ಕಮಗಳೂರು ರವರಿಗೆ ಸೂಚಿಸಲಾಗಿದೆ.

ಭಾರತದ ರಾಷ್ಟ್ರಪತಿಗಳ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 902

**ಇ. ಈಶ್ವರ ನಾಯಕ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಭೂ.ಮಂ.)

**ವಿಷಯ :** ವಿಕೋಪದಂತಹ ತುರ್ತು ಕಾರ್ಯಕ್ಕೆ ಉಪಯೋಗಿಸಲು ಜಿಲ್ಲಾಧಿಕಾರಿಗಳಿಗೆ ವಾಹನ ಒದಗಿಸುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರಿ ಆದೇಶ ಸಂಖ್ಯೆ: ಕಂ.ಇ. 311 ಟಿಎನ್.ಆರ್. 2006, ದಿನಾಂಕ 5–2–2008.

2. ಜಿಲ್ಲಾಧಿಕಾರಿ, ಬೆಂಗಳೂರು ನಗರ ಜಿಲ್ಲೆ ಇವರ ಅ.ಸ. ಪತ್ರ ಸಂಖ್ಯೆ: ಸಿಎಎಲ್/ಸಿಆರ್/ 2008–09, ದಿನಾಂಕ 24–5–2008.

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ಸರ್ಕಾರಿ ಆದೇಶದಲ್ಲಿ ಪ್ರಕೃತಿ ವಿಕೋಪದಂತಹ ಸಂದರ್ಭದಲ್ಲಿ ತುರ್ತು ರಕ್ಷಣಾ ಕಾರ್ಯ ಕೈಗೊಳ್ಳಲು ಬೆಂಗಳೂರು ನಗರ ಜಿಲ್ಲೆಯ ಜಿಲ್ಲಾಧಿಕಾರಿಗಳಿಗೆ ಒಂದು ವಾಹನವನ್ನು (ನಾಲ್ಕು ಚಕ್ರಗಳ) ಖರೀದಿಸಲು ರೂ. 5.50 ಲಕ್ಷ ಮಂಜೂರಾತಿ ನೀಡಲಾಗಿತ್ತು.

ಮೇಲೆ ಓದಲಾದ (2)ರ ಪತ್ರದಲ್ಲಿ ಜಿಲ್ಲಾಧಿಕಾರಿ, ಬೆಂಗಳೂರು ನಗರ ಜಿಲ್ಲೆ ಇವರು, ಅದ್ವೈತ್ ಮೋಟಾರ್ಸ್ ಪ್ರೈವೇಟ್ ಲಿಮಿಟೆಡ್‌ರವರ ದರಪಟ್ಟಿ (Invoice)ರ ಪ್ರಕಾರ Hyundai Verna XXI PET ABS ವಾಹನ ದರವು ವಿಮೆ ಸೇರಿದಂತೆ ರೂ. 8.00 ಲಕ್ಷ (ಎಂಟು ಲಕ್ಷಗಳು) ಆಗುವುದೆಂದು ತಿಳಿಸಿ, ಹೆಚ್ಚುವರಿ ರೂ. 2.50 ಲಕ್ಷಗಳನ್ನು ಮಂಜೂರಾತಿ ನೀಡುವಂತೆ ಕೋರಿರುತ್ತಾರೆ. ಸರ್ಕಾರವು ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 311 ಟಿಎನ್‌ಆರ್ 2006, ಬೆಂಗಳೂರು, ದಿನಾಂಕ: 31ನೇ ಮೇ 2008.**

ಮೇಲೆ ಓದಲಾದ ಸರ್ಕಾರಿ ಆದೇಶ ಸಂಖ್ಯೆ: ಕಂ.ಇ. 311 ಟಿಎನ್‌ಆರ್ 2008, ದಿನಾಂಕ 5–2–2008ನ್ನು ಹಿಂದಕ್ಕೆ ಪಡೆದು, ಸರ್ಕಾರವು ರಕ್ಷಣಾ ಕಾರ್ಯಕ್ಕಾಗಿ ಜಿಲ್ಲಾಧಿಕಾರಿಗಳಿಗೆ ಒಂದು ವಾಹನವನ್ನು (4 wheelers) ಈ ಕೆಳಕಂಡ ಷರತ್ತುಗಳಿಗೊಳಪಟ್ಟು, ನಿಯಮಾನುಸಾರ ಖರೀದಿಸಲು ಅನುಮೋದನೆ ನೀಡಿದೆ.

1) ಈ ವಾಹನವು all terrain, all weather ನಲ್ಲಿ ಬಳಸುವಂತಿರಬೇಕು.
2) ಈ ವಾಹನದಲ್ಲಿ ಕನಿಷ್ಠ 4–5 ಜನರಿಗೆ ಸ್ಥಳಾವಕಾಶವಿರಬೇಕು.
3) ಈ ವಾಹನವು ತುರ್ತು ಸಂದರ್ಭದಲ್ಲಿ search and rescue equipment ಗಳನ್ನು ಅಳವಡಿಸಿಕೊಂಡು ಸಾಗಿಸುವಂತಿರಬೇಕು.

   ವಾಹನದ ದುರಸ್ತಿ, ವೆಚ್ಚ, ನಿರ್ವಹಣೆ, ಇಂಧನ ವೆಚ್ಚ, ಚಾಲಕರ ವೇತನ ಹಾಗೂ ಇತರೆ ಖರ್ಚು ವೆಚ್ಚಗಳನ್ನು ಜಿಲ್ಲಾಧಿಕಾರಿಗಳು ಅವರ ವಾರ್ಷಿಕ ಆಯ–ವ್ಯಯ ಅನುದಾನದಲ್ಲಿಯೇ ಭರಿಸತಕ್ಕದ್ದು. ಸಿ.ಆರ್.ಎಫ್. ನಿಧಿಯಿಂದ ಭರಿಸುವಂತಿಲ್ಲ.
4) ಈ ವಾಹನವು ಯಾವುದೇ ವಿಕೋಪದಂತಹ ತುರ್ತು ಕಾರ್ಯಕ್ಕೆ ಉಪಯೋಗಿಸುವಂತಿರಬೇಕು.
5) ವಾಹನ ಖರೀದಿಯ ಎಲ್ಲಾ ಪ್ರಕ್ರಿಯೆಯನ್ನು ಈ ಆರ್ಥಿಕ ವರ್ಷದಲ್ಲಿಯೇ ಮುಗಿಸುವುದು.

ಈ ಅನುದಾನವನ್ನು ವೆಚ್ಚ ಮಾಡುವಾಗ ಕಾಲಕಾಲಕ್ಕೆ ಸರ್ಕಾರವು ಹೊರಡಿಸಿರುವ ಮಾರ್ಗಸೂಚಿ/ಆದೇಶ/ಸುತ್ತೋಲೆ ಹಾಗೂ ಖರೀದಿ ನಿಯಮಗಳನ್ನು ಪಾಲಿಸುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 904

**ಆರ್. ಲೀಲಾವತಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ವಿಪತ್ತು ನಿರ್ವಹಣೆ)

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಹೆಚ್.ಎಸ್. ರೇವಣ್ಣ ಐಪಿಎಸ್ ರವರಿಗೆ ವಿಶೇಷ ದುರ್ಬಲತೆ ರಜೆ ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ:** ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾನಿರೀಕ್ಷಕರು, ಬೆಂಗಳೂರು ಇವರ ಪತ್ರ ಸಂಖ್ಯೆ ಸಿಬಿ 3/44/2007, ದಿ: 17–5–2008.

**ಪ್ರಸ್ತಾವನೆ :**

ಶ್ರೀ ಹೆಚ್.ಎಸ್. ರೇವಣ್ಣ, ಐಪಿಎಸ್‌ರವರು ಈ ಹಿಂದೆ ಎಸ್.ಪಿ. ರಾಮನಗರ ಜಿಲ್ಲೆ ಹುದ್ದೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ದಿನಾಂಕ 20–9–2007ರಂದು ರಾಮನಗರ ಜಿಲ್ಲಾ ಪಂಚಾಯಿತಿಯ ಅಧ್ಯಕ್ಷರು ಉಪಾಧ್ಯಕ್ಷರ ಹುದ್ದೆಗಳ ಚುನಾವಣೆ ನಡೆದಿದ್ದು, ಕಾನೂನು & ಸುವ್ಯವಸ್ಥೆ ಕರ್ತವ್ಯವನ್ನು ನಿರ್ವಹಿಸುತ್ತಿದ್ದಾಗ ಸದರಿ ಆದಿಕಾರಿಯವರ ಎಡಗಡೆ ಕಾಲಿನ 4 ಬೆರಳುಗಳಿಗೆ ಪ್ರಾಕ್ಚರ್ ಆಗಿತ್ತು. ಈ ಕಾರಣದಿಂದ ಸದರಿ ಅಧಿಕಾರಿಯವರು ದಿನಾಂಕ 21–9–2007 ರಿಂದ 4–11–2007ರ ಅವಧಿಗೆ ಕೆ.ಸಿ.ಎಸ್.ಆರ್. ನಿಯಮ 136 & 137ರ ಪ್ರಕಾರ ವಿಶೇಷ ದುರ್ಬಲತೆ ರಜೆ ಮಂಜೂರು ಮಾಡುವಂತೆ ಕೋರಿದ್ದರು. ಸದರಿ ಅಧಿಕಾರಿಯವರ ಕಾಲಿನ ಬೆರಳುಗಳಿಗೆ ಆಗಿದ್ದ ಪ್ರಾಕ್ಚರ್ ಬಗ್ಗೆ ಮುಖ್ಯ ವೈದ್ಯಾಧಿಕಾರಿಗಳು ಸಾರ್ವಜನಿಕ ಆಸ್ಪತ್ರೆ ರಾಮನಗರ ಜಿಲ್ಲೆರವರಿಂದ ಅಭಿಪ್ರಾಯ ಪಡೆಯಲಾಗಿದ್ದು ಅವರು ಸದರಿ ಅಧಿಕಾರಿಯವರಿಗೆ ವಿಶೇಷ ದುರ್ಬಲತೆ ರಜೆ ನೀಡಬಹುದೆಂದು ಅಭಿಪ್ರಾಯಪಟ್ಟಿರುತ್ತಾರೆ.

ಐಜಿಪಿ ಕೇಂದ್ರ ವಲಯ ಬೆಂಗಳೂರುರವರ ಜ್ಞಾಪನ ಸಂಖ್ಯೆ ಸಿಬ್ಬಂದಿ (2)/ಸಿ.ಎಸ್.5.2007, ದಿನಾಂಕ 24–9–2007 ಮತ್ತು 23–10–2007ರಲ್ಲಿ ಸದರಿ ಅಧಿಕಾರಿಯವರಿಗೆ ದಿನಾಂಕ 24–9–2007ರಿಂದ 23–10–2007ರ ಅವಧಿಗೆ & ದಿನಾಂಕ 24–10–2007ರಿಂದ 4–11–2007ರವರೆಗೆ ಈಗಾಗಲೇ ಪರಿವರ್ತಿತ ರಜೆಯನ್ನು ಮಂಜೂರು ಮಾಡಿರುತ್ತಾರೆ. ಶ್ರೀ ಹೆಚ್.ಎಸ್. ರೇವಣ್ಣ ಐಪಿಎಸ್‌ರವರು ಕಾನೂನು & ಸುವ್ಯವಸ್ಥೆ ಕರ್ತವ್ಯವನ್ನು ನಿರ್ವಹಿಸುತ್ತಿದ್ದಾಗ ಅವರ ಕಾಲಿನ ಬೆರಳುಗಳಿಗೆ ಪ್ರಾಕ್ಚರ್ ಆಗಿರುವುದರಿಂದ ಐಜಿಪಿ ಕೇಂದ್ರ ವಲಯ ಬೆಂಗಳೂರುರವರು ಈಗಾಗಲೇ ಮಂಜೂರು ಮಾಡಿರುವ ಪರಿವರ್ತಿತ ರಜೆಯನ್ನು ರದ್ದುಪಡಿಸಿ ದಿನಾಂಕ 21–9–2007ರಿಂದ 4–11–2007ರ ಅವಧಿಗೆ ವಿಶೇಷ ದುರ್ಬಲತೆ ರಜೆ ಮಂಜೂರು ಮಾಡುವಂತೆ ಮೇಲೆ ಓದಲಾದ (1)ರ ಪತ್ರದಲ್ಲಿ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು ಕೋರಿರುತ್ತಾರೆ.

ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರವರ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 99 ಎಸ್‌ಪಿಎಸ್ 2008, ಬೆಂಗಳೂರು, ದಿನಾಂಕ: 26ನೇ ಜೂನ್ 2008.**

ಮೇಲೆ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಶ್ರೀ ಹೆಚ್.ಎಸ್. ರೇವಣ್ಣ, ಐಪಿಎಸ್ ಇವರಿಗೆ ಐಜಿಪಿ ಕೇಂದ್ರ ವಲಯ ಬೆಂಗಳೂರುರವರ ಜ್ಞಾಪನ ಸಂಖ್ಯೆ ಸಿಬ್ಬಂದಿ (2)/ಸಿ.ಎಸ್.5/2007ರಲ್ಲಿ ಸದರಿ ಅಧಿಕಾರಿಯವರಿಗೆ ದಿನಾಂಕ 24–9–2007 ಮತ್ತು 23–10–2007ರಲ್ಲಿ ಮಂಜೂರು ಮಾಡಲಾದ ಪರಿವರ್ತಿತ ರಜೆಯನ್ನು, ಭಾರತೀಯ ಆಡಳಿತ ಸೇವೆ (ರಜೆ ನಿಯಮಗಳು) 1955ರ ನಿಯಮ 19ರಡಿ ಮಾರ್ಪಡಿಸಿ ದಿನಾಂಕ 21–9–2007 ರಿಂದ 4–11–2008ರ ವರೆಗೆ ವಿಶೇಷ ದುರ್ಬಲತೆ ರಜೆಯನ್ನು ಭಾರತೀಯ ಆಡಳಿತ ಸೇವೆ (ವಿಶೇಷ ದುರ್ಬಲತೆ ರಜೆ) ನಿಯಮಗಳು 1957ರ ನಿಯಮ 3(1)(ii)ರಡಿ ಮಂಜೂರು ಮಾಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 978

**ಕೆ.ಜಿ. ಅನಂತ**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿ.ಆ.ಸು.ಇ. (ಸೇವೆಗಳು–1)

## ನಗರಾಭಿವೃದ್ಧಿ ಸಚಿವಾಲಯ

**ವಿಷಯ :** ಸರ್ಕಾರಿ–ಖಾಸಗಿ ಸಹಭಾಗಿತ್ವದಡಿಯಲ್ಲಿ ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದ ವತಿಯಿಂದ ಪೆರಿಫೆರಲ್ ರಿಂಗ್ ರಸ್ತೆಯನ್ನು ರೂಪಿಸಿ ಅಭಿವೃದ್ಧಿಪಡಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ: ನಅಇ 399 ಎಂಎನ್‌ಎಕ್ಸ್ 2006, ದಿನಾಂಕ 23–4–2007.
2. ಮುಖ್ಯ ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿ ನಡೆದ ದಿನಾಂಕ 21–11–2007ರ ಸಭೆಯ ನಡವಳಿಗಳು.
3. ಕೇಂದ್ರ ಭೂ ಸಾರಿಗೆ ಇಲಾಖೆಗೆ ಬರೆಯಲಾದ ಅರೆ ಸರ್ಕಾರಿ ಪತ್ರ ಸಂಖ್ಯೆ: ಯುಡಿಡಿ 528 ಎಂಎನ್‌ಎಕ್ಸ್ 2007, ದಿನಾಂಕ 10–1–2008.

**ಪ್ರಸ್ತಾವನೆ :**

ಬೆಂಗಳೂರು ನಗರದಲ್ಲಿನ ವಾಹನ ದಟ್ಟಣೆಯನ್ನು ತಗ್ಗಿಸುವ ಸಲುವಾಗಿ ಬೆಂಗಳೂರು ನಗರದ ಸುತ್ತ ಪೆರಿಫೆರಲ್ ರಿಂಗ್ ರಸ್ತೆಯನ್ನು ರೂಪಿಸುವ ಯೋಜನೆಯನ್ನು ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರವು ಕೈಗೊಂಡಿದ್ದು, ಈ ರಸ್ತೆಯ ಒಟ್ಟು ಉದ್ದ 116 ಕಿಲೋ ಮೀಟರ್‌ಗಳಾಗಿರುತ್ತದೆ. ಎರಡು ಹಂತದಲ್ಲಿ ಈ ಯೋಜನೆಯನ್ನು ಜಾರಿಗೊಳಿಸಲು ಚಿಂತನೆ ನಡೆಸಿ ಮೊದಲನೆ ಹಂತದಲ್ಲಿ ತುಮಕೂರು ರಸ್ತೆಯಿಂದ ಹೊಸೂರು ರಸ್ತೆಯವರೆಗಿನ 65 ಕಿಲೋಮೀಟರ್ ದೂರದ ರಸ್ತೆಯನ್ನು

ಅಂದಾಜು ವೆಚ್ಚ ರೂ. 1600 ಕೋಟಿಗಳಲ್ಲಿ ಹಾಗೂ ಹೊಸೂರು ರಸ್ತೆಯಿಂದ ತುಮಕೂರು ರಸ್ತೆಯವರೆಗೆ ಎರಡನೇ ಹಂತದಲ್ಲಿ 51 ಕಿ.ಮೀ. ರಸ್ತೆಯನ್ನು ಅಂದಾಜು ವೆಚ್ಚ ರೂ. 1075 ಕೋಟಿಗಳಲ್ಲಿ ಜಾರಿಗೊಳಿಸಲು ಯೋಜಿಸಿ ಮೇಲೆ (1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಸದರಿ ಫೆರಿಫೆರಲ್ ರಿಂಗ್ ರಸ್ತೆ ನಿರ್ಮಾಣಕ್ಕೆ ಒಪ್ಪಿಗೆ ನೀಡಲಾಗಿದೆ.

2) ಮೇಲೆ (2)ರ ದಿನಾಂಕ 21–11–2007ರಲ್ಲಿ ಓದಲಾದ ದಿನಾಂಕದಂದು ಸರ್ಕಾರದ ಮುಖ್ಯಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿ ನಡೆದ ಸಭೆಯಲ್ಲಿ, ಕೇಂದ್ರ ಭೂಸಾರಿಗೆ ಮಂತ್ರಾಲಯವು ರಾಷ್ಟ್ರೀಯ ಹೆದ್ದಾರಿಗಳಿಗೆ ಸೂಕ್ತ ಸಂಪರ್ಕವನ್ನು ಕಲ್ಪಿಸಲು ಅನುವಾಗುವಂತೆ ಭಾರತ ರಾಷ್ಟ್ರೀಯ ಹೆದ್ದಾರಿ ಮೂಲಕ ಸದರಿ ಫೆರಿಫೆರಲ್ ರಿಂಗ್ ರಸ್ತೆ ನಿರ್ಮಾಣ ಯೋಜನೆಯನ್ನು ಕೈಗೆತ್ತಿಕೊಳ್ಳಲು ವ್ಯಕ್ತಪಡಿಸಿದ ಉದ್ದೇಶದ ಹಿನ್ನೆಲೆಯಲ್ಲಿ, ಈ ಯೋಜನೆಯನ್ನು ಎನ್.ಹೆಚ್.ಎ.ಐ.ಗೆ ವಹಿಸಿಕೊಡಲು ನಿರ್ಣಯ ಕೈಗೊಳ್ಳಲಾಯಿತು.

3) ಪೆರಿಫೆರಲ್ ರಿಂಗ್ ರಸ್ತೆ ಯೋಜನೆಯನ್ನು ರಾಷ್ಟ್ರೀಯ ಹೆದ್ದಾರಿ ಪ್ರಾಧಿಕಾರಕ್ಕೆ ಹಸ್ತಾಂತರಿಸುವ ಬಗ್ಗೆ ಕೇಂದ್ರ ಸರ್ಕಾರ ಹಾಗೂ ರಾಜ್ಯ ಸರ್ಕಾರದ ಮಟ್ಟದಲ್ಲಿ ಹಲವಾರು ಬಾರಿ ಚರ್ಚಿಸಿ, ನಂತರ ಪೆರಿಫೆರಲ್ ರಿಂಗ್ ರಸ್ತೆಯ ಯೋಜನೆಯನ್ನು ರಾಷ್ಟ್ರೀಯ ಹೆದ್ದಾರಿ ಪ್ರಾಧಿಕಾರಕ್ಕೆ ಹಸ್ತಾಂತರಿಸುವಲ್ಲಿ ಈ ಯೋಜನೆಯನ್ನು ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದಿಂದ ರಾಷ್ಟ್ರೀಯ ಹೆದ್ದಾರಿ ಪ್ರಾಧಿಕಾರಕ್ಕೆ ಹಸ್ತಾಂತರಿಸುವ ಬಗ್ಗೆ ತಾತ್ವಿಕ ಒಪ್ಪಿಗೆ ನೀಡಿದ ಮೇರೆಗೆ, ಮೇಲೆ (3)ರಲ್ಲಿ ಓದಲಾದ ದಿನಾಂಕ 10–1–2008ರಲ್ಲಿ ಈ ಯೋಜನೆಯನ್ನು ಎಲ್ಲಿ ಹೇಗಿದೆಯೋ ಹಾಗೆ ಆಧಾರದ ಮೇಲೆ ರಾಷ್ಟ್ರೀಯ ಹೆದ್ದಾರಿ ಪ್ರಾಧಿಕಾರಕ್ಕೆ ವರ್ಗಾಯಿಸಲು ಕರ್ನಾಟಕ ಸರ್ಕಾರದ ತಾತ್ವಿಕ ಒಪ್ಪಿಗೆಯನ್ನು ಕೇಂದ್ರ ಭೂ ಸಾರಿಗೆ ಮಂತ್ರಾಲಯಕ್ಕೆ ತಿಳಿಸಲಾಗಿತ್ತು.

4) ಮತ್ತೊಂದು ಪ್ರತ್ಯೇಕ ಬೆಳವಣಿಗೆಯಲ್ಲಿ ನೂತನ ವಿಮಾನ ನಿಲ್ದಾಣಕ್ಕೆ ಸುಗಮ ವಾಹನ ಸಂಚಾರ ಏರ್ಪಡಿಸುವ ನಿಟ್ಟಿನಲ್ಲಿ ರಸ್ತೆಯ ಸಂಪರ್ಕವನ್ನು ಅಭಿವೃದ್ಧಿಗೊಳಿಸಲು, ರಾಷ್ಟ್ರೀಯ ಹೆದ್ದಾರಿ ಪ್ರಾಧಿಕಾರವು ಹೆಬ್ಬಾಳ ಮೇಲು ಸೇತುವೆಯಿಂದ ಯಲಹಂಕದವರೆಗೆ 6 ಪಥದ ಎಲಿವೇಟೆಡ್ ಕಾರಿಡಾರ್ ನಿರ್ಮಿಸುವ ಪ್ರಸ್ತಾವನೆಯ ಹಿನ್ನೆಲೆಯಲ್ಲಿ ಹಾಗೂ ಭವಿಷ್ಯದ ವಾಹನ ಅಗತ್ಯಗಳನ್ನು ಪೂರೈಸುವ ನಿಟ್ಟಿನಲ್ಲಿ ಹೆಬ್ಬಾಳ ಮೇಲು ಸೇತುವೆಯ ಸಾಮರ್ಥ್ಯವನ್ನು ಹೆಚ್ಚಿಸುವ ಬಗ್ಗೆ ದಿನಾಂಕ 25–1–2008ರಂದು ನಡೆಸಿದ ಸಭೆಯಲ್ಲಿ ವಿಸ್ತೃತವಾಗಿ ಚರ್ಚಿಸಲಾಯಿತು. ಸುಗಮ ವಾಹನ ಸಂಚಾರದ ದೃಷ್ಟಿಯಿಂದ ಬಿ.ಡಿ.ಎ. ನಿರ್ಮಿತ ಹೆಬ್ಬಾಳ ಮೇಲು ಸೇತುವೆಯನ್ನು ಮೇಲ್ದರ್ಜೆಗೇರಿಸುವ ಮತ್ತು 6 ಪಥದ ಎಲಿವೇಟೆಡ್ ಕಾರಿಡಾರ್‌ಗೆ ಅದನ್ನು ಅಳವಡಿಸುವ ರಾಷ್ಟ್ರೀಯ ಹೆದ್ದಾರಿ ಪ್ರಾಧಿಕಾರದ ಪ್ರಸ್ತಾವನೆ ಅಗತ್ಯವೆನಿಸಿದ್ದರಿಂದ, ಹೆಬ್ಬಾಳ ಮೇಲು ಸೇತುವೆಯನ್ನು ರಾಷ್ಟ್ರೀಯ ಹೆದ್ದಾರಿ ಪ್ರಾಧಿಕಾರಕ್ಕೆ ವರ್ಗಾಯಿಸುವ ಬಗ್ಗೆ ಒಪ್ಪಿಗೆ ನೀಡಲಾಗಿದೆ.

5) ಪೆರಿಫೆರಲ್ ರಿಂಗ್ ರಸ್ತೆ ಯೋಜನೆಯನ್ನು ರಾಷ್ಟ್ರೀಯ ಹೆದ್ದಾರಿ ಪ್ರಾಧಿಕಾರಕ್ಕೆ ವರ್ಗಾಯಿಸುವ ಹಿನ್ನೆಲೆಯಲ್ಲಿ ಯೋಜನೆಯ ಸ್ವರೂಪ, ವಿಧಿ ವಿಧಾನ, ತಾಂತ್ರಿಕತೆ ಹಾಗೂ ಆರ್ಥಿಕತೆಯ ಬಗ್ಗೆ ಕೇಂದ್ರ ಹಾಗೂ ರಾಜ್ಯ ಸರ್ಕಾರದ ಅಧಿಕಾರಿಗಳ ಹಂತದಲ್ಲಿ ಸಾಕಷ್ಟು ಸಭೆಗಳು ನಡೆದಿದೆ. ಆದರೆ ಇತ್ತೀಚಿನ ಬೆಳವಣಿಗೆಯಲ್ಲಿ ಪೆರಿಫೆರಲ್ ರಿಂಗ್ ರಸ್ತೆಯ ಮೊದಲನೆ ಹಂತದ ಯೋಜನೆಯಲ್ಲಿ ಕೇಂದ್ರ ಸರ್ಕಾರದ ನೀತಿಗೆ ಅನುಗುಣವಾಗಿ ಭಾರತ ರಾಷ್ಟ್ರೀಯ ಹೆದ್ದಾರಿ ಪ್ರಾಧಿಕಾರವು 60 ಮೀಟರ್ ಅಗಲದ ರಸ್ತೆಯ ಭೂ ಸ್ವಾಧೀನ ವೆಚ್ಚವನ್ನು ಮಾತ್ರ ಭರಿಸುತ್ತದೆ ಎಂದು ಭಾರತ ರಾಷ್ಟ್ರೀಯ ಹೆದ್ದಾರಿ ಪ್ರಾಧಿಕಾರದ ಅಧ್ಯಕ್ಷರು ಸ್ಪಷ್ಟಪಡಿಸಿದ್ದು, ಉಳಿದ 40 ಮೀಟರ್ ಅಗಲದ ಭೂ ಸ್ವಾಧೀನ ವೆಚ್ಚವನ್ನು ಬಿ.ಡಿ.ಎ./ ರಾಜ್ಯ ಸರ್ಕಾರವು ಭರಿಸಬೇಕೆಂದು ಸಲಹೆ ಮಾಡಲಾಗಿರುತ್ತದೆ.

6) ಮೇಲ್ಕಂಡ ಎಲ್ಲಾ ಅಂಶಗಳ ಹಿನ್ನೆಲೆಯಲ್ಲಿ, ದಿನಾಂಕ 9–6–2008ರಂದು ಸರ್ಕಾರದ ಮುಖ್ಯ ಕಾರ್ಯದರ್ಶಿಗಳು ನಡೆಸಿದ ಸಭೆಯಲ್ಲಿ ಭಾರತ ರಾಷ್ಟ್ರೀಯ ಹೆದ್ದಾರಿ ಪ್ರಾಧಿಕಾರವು ರಸ್ತೆಯ 60 ಮೀಟರ್ ಅಗಲದ ಭೂ ಸ್ವಾಧೀನ ವೆಚ್ಚವನ್ನು ಮಾತ್ರ ಭರಿಸುವ ಪ್ರಸ್ತಾವನೆಯು ಈ ಹಿಂದೆ ಪೆರಿಫೆರಲ್ ರಿಂಗ್ ರಸ್ತೆಯನ್ನು ರಾಷ್ಟ್ರೀಯ ಹೆದ್ದಾರಿ ಪ್ರಾಧಿಕಾರಕ್ಕೆ ಎಲ್ಲಿ ಹೇಗಿದೆಯೋ ಹಾಗೆ ವರ್ಗಾಯಿಸುವ ಹಿಂದಿನ ನಿರ್ಧಾರಕ್ಕೆ ವ್ಯತಿರಿಕ್ತವಾಗಿರುವುದನ್ನು ಗಮನಿಸಿ, ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರವು ಪೆರಿಫೆರಲ್ ರಿಂಗ್ ರಸ್ತೆಯ ಮೊದಲನೆಯ ಹಂತ ಮತ್ತು ಎರಡನೆಯ ಹಂತದ ಯೋಜನೆಯನ್ನು ಸರ್ಕಾರಿ–ಖಾಸಗಿ ಸಹಭಾಗಿತ್ವದಡಿಯಲ್ಲಿ ಭಾರತ ಸರ್ಕಾರದಿಂದ ಅಗತ್ಯ ಹಣಕಾಸಿನ ಕೊರತೆಯನ್ನು ಪಡೆಯುವ ಮೂಲಕ (Availing viability gap funding) ಪ್ರಾಧಿಕಾರವೇ ಯೋಜನೆಯನ್ನು ಜಾರಿಗೊಳಿಸುವ ಬಗ್ಗೆ ಸಮ್ಮತಿಸಿರುತ್ತದೆ. ಅದರಂತೆ ಈ ಯೋಜನೆಯನ್ನು ಒಂದು ಹಂತದಲ್ಲಿ JNNURM ಯೋಜನೆಯಡಿಯಲ್ಲಿ ಕೈಗೆತ್ತಿಕೊಳ್ಳುವ ಬಗ್ಗೆ ಪರಿಶೀಲಿಸಿ, ಚಿಂತಿಸಿದ ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರವು ಈ ಹಿಂದೆ ಮೂಲದಲ್ಲಿ ಯೋಜಿಸಿದಂತೆ ಯೋಜನೆಯನ್ನು ಪ್ರಾಧಿಕಾರವೇ ಜಾರಿಗೊಳಿಸಲು ಸಾಧ್ಯವೆಂಬ ಹಿನ್ನೆಲೆಯಲ್ಲಿ ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದ ವತಿಯಿಂದಲೇ ಪೆರಿಫೆರಲ್ ರಿಂಗ್ ರಸ್ತೆಯ ಮೊದಲನೆಯ ಮತ್ತು ಎರಡನೆಯ ಹಂತದ ಯೋಜನೆಯನ್ನು ಸರ್ಕಾರಿ–ಖಾಸಗಿ ಸಹಭಾಗಿತ್ವ ಯೋಜನೆಯಡಿಯಲ್ಲಿ ಕೈಗೆತ್ತಿಕೊಳ್ಳಲು ಪ್ರಾಧಿಕಾರವು ತನ್ನ ದಿನಾಂಕ 9–6–2008ರ ನಿರ್ಣಯ ಸಂಖ್ಯೆ 448/2008ರಲ್ಲಿ ನಿರ್ಣಯವನ್ನು ಕೈಗೊಂಡಿರುತ್ತದೆ. ಈ ವಾಸ್ತವಾಂಶಗಳ ಹಿನ್ನೆಲೆಯಲ್ಲಿ, ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ನಅಇ 528 ಎಂಎಸ್‌ಎಕ್ಸ್ 2007, ಬೆಂಗಳೂರು, ದಿನಾಂಕ: 24ನೇ ಜೂನ್ 2008.**

ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳ ಹಿನ್ನೆಲೆಯಲ್ಲಿ ಪ್ರಸ್ತಾಪಿತ ಪೆರಿಫೆರಲ್ ರಿಂಗ್ ರಸ್ತೆ, ಯೋಜನೆಯನ್ನು ಭಾರತ ರಾಷ್ಟ್ರೀಯ ಹೆದ್ದಾರಿ ಪ್ರಾಧಿಕಾರಕ್ಕೆ ವರ್ಗಾಯಿಸುವ ನಿರ್ಣಯವನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಿಂಪಡೆಯಲಾಗಿದೆ. ಉದ್ದೇಶಿತ ಪೆರಿಫೆರಲ್ ರಿಂಗ್ ರಸ್ತೆಯ ಮೊದಲನೆಯ ಹಂತ ಮತ್ತು ಎರಡನೆಯ ಹಂತದ ಯೋಜನೆಯನ್ನು, ಸರ್ಕಾರಿ–ಖಾಸಗಿ ಸಹಭಾಗ್ವದಡಿಯಲ್ಲಿ ಭಾರತ ಸರ್ಕಾರದಿಂದ ಅಗತ್ಯ ಹಣಕಾಸಿನ ಕೊರತೆಯನ್ನು ಪಡೆಯುವ ಅಥವಾ ಪಡೆಯದಿರುವ ಮೂಲಕ (with or without Availing viability gap funding) ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರವೇ ಈ ಹಿಂದೆ ಮೂಲತಃ ಯೋಜಿಸಿದಂತೆ ಜಾರಿಗೊಳಿಸಲು ಆದೇಶಿಸಿದೆ.

ಮುಂದುವರಿದು, ಸುಗಮ ವಾಹನ ಸಂಚಾರ ದೃಷ್ಟಿಯಿಂದ ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದ ಹೆಬ್ಬಾಳ ಮೇಲು ಸೇತುವೆಯನ್ನು ಭಾರತ ರಾಷ್ಟ್ರೀಯ ಹೆದ್ದಾರಿ ಪ್ರಾಧಿಕಾರಕ್ಕೆ ವರ್ಗಾಯಿಸಲು ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರಕ್ಕೆ ಅನುಮತಿ ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 979

**ಎಂ.ಎಸ್. ಪ್ರೇಮಚಂದ್ರ**

ಸರ್ಕಾರದ ಅಧೀನ ಕಾರ್ಯದರ್ಶಿ,

ನಗರಾಭಿವೃದ್ಧಿ ಇಲಾಖೆ

**ಒಳಾಡಳಿತ ಸಚಿವಾಲಯ**

**ವಿಷಯ :** ಶ್ರೀ ಸುರೇಂದ್ರ ರಾವ್, ಡಿವೈಎಸ್‌ಪಿ, ಶ್ರೀ ಪ್ರೇಮ್ ಸಾಯಿ ಜಿ.ರೈ. ಪೊಲೀಸ್ ಇನ್ಸ್‌ಪೆಕ್ಟರ್ ಮತ್ತು ಶ್ರೀ ವಜೀರ್, ಪೊಲೀಸ್ ಸಬ್ ಇನ್ಸ್‌ಪೆಕ್ಟರ್ ಇವರುಗಳ ವಿರುದ್ಧ ಜಂಟಿ ಇಲಾಖಾ ವಿಚಾರಣೆಯ ಬಗ್ಗೆ ಅಂತಿಮ ಅದೇಶ.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ: ಒಇ 438 ಪೊಸಿಪ 2006, ದಿನಾಂಕ 21–2–2007.

2. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು ರವರ ಕಛೇರಿ ಪತ್ರ ಸಂಖ್ಯೆ ಸಿಬಿ(5)3/2006–07, ದಿನಾಂಕ 7–2–2008 ಮತ್ತು 30–5–2008.

**ಪ್ರಸ್ತಾವನೆ :**

ಶ್ರೀ ವಜೀರ್, ಪಿಎಸ್‌ಐ, ಆನೇಕಲ್ ಪೊಲೀಸ್ ಠಾಣೆ, ಶ್ರೀ ಪ್ರೇಮ್ ಸಾಯಿ ಜಿ. ರೈ., ಪೊಲೀಸ್ ಇನ್ಸ್‌ಪೆಕ್ಟರ್, ಅತ್ತಿಬೆಲೆ ಮತ್ತು ಶ್ರೀ ಸುರೇಂದ್ರರಾವ್, ಡಿವೈಎಸ್‌ಪಿ, ಬೆಂಗಳೂರು ಉಪ ವಿಭಾಗ ಇವರುಗಳು ಆನೇಕಲ್ ಪೊಲೀಸ್ ಠಾಣೆಯ ಮೊ.ಸಂ. 91/05ರ ಕಲಂ 498ಎ, 304ಬಿ, 307 ರೆ/ವಿ 34 ಐ.ಪಿ.ಸಿ. ಪ್ರಕರಣದ ತನಿಖೆಯನ್ನು ಸಮರ್ಪಕವಾಗಿ ನಡೆಸದೆ ಇರುವುದು ಕಂಡು ಬಂದಿದೆ ಎಂದು ಡಿಜಿಪಿ, ಸಿ.ಓ.ಡಿ. ಬೆಂಗಳೂರು ಇವರ ವರದಿಯನ್ನು ಆಧರಿಸಿ ಈ ಕೆಳಕಂಡ ದೋಷಾರೋಪಣೆಯನ್ನು ಆರೋಪಿತ ಪೊಲೀಸ್ ಅಧಿಕಾರಿಗಳ ವಿರುದ್ಧ ಹೊರಿಸಿ, ಓದಲಾದ (1)ರ ಸರ್ಕಾರದ ಆದೇಶದಲ್ಲಿ ಜಂಟಿ ಇಲಾಖಾ ವಿಚಾರಣೆಗೆ ಆದೇಶಿಸಲಾಗಿತ್ತು.

**ದೋಷಾರೋಪಣೆ:**

ಶ್ರೀ ವಜೀರ್, ಪಿಎಸ್‌ಐ, ಆನೇಕಲ್ ಪೊಲೀಸ್ ಠಾಣೆ, ಶ್ರೀ ಪ್ರೇಮ್ ಸಾಯಿ ಜಿ. ರೈ., ಸಿಪಿಐ, ಅತ್ತಿಬೆಲೆ ವೃತ್ತ ಮತ್ತು ಶ್ರೀ ಸುರೇಂದ್ರರಾವ್, ಡಿಎಸ್‌ಪಿ, ಬೆಂಗಳೂರು ಉಪ ವಿಭಾಗ ಆದ ನೀವುಗಳು ಆನೇಕಲ್ ಪೊಲೀಸ್ ಠಾಣೆಯ ಮೊ.ಸಂ. 91/05ರ ಕಲಂ 498ಎ 304ಬಿ, 307 ರೆ/ವಿ 34 ಐ.ಪಿ.ಸಿ. ಪ್ರಕರಣದಲ್ಲಿ ಸಮರ್ಪಕ ತನಿಖೆ ಮಾಡದೇ ಈ ಕೆಳಕಂಡ ಲೋಪಗಳನ್ನು ಎಸಗಿ, ತಮ್ಮ ಕರ್ತವ್ಯದಲ್ಲಿ ಘೋರ ನಿರ್ಲಕ್ಷತೆ, ಬೇಜವಾಬ್ದಾರಿತನ ಪ್ರದರ್ಶಿಸಿರುತ್ತೀರಿ.

**ಶ್ರೀ ವಜೀರ್, ಪೊಲೀಸ್ ಸಬ್ ಇನ್ಸ್‌ಪೆಕ್ಟರ್, ಆನೇಕಲ್ ಪೊಲೀಸ್ ಠಾಣೆ:**

ಶ್ರೀಮತಿ ರೂಪ, 20 ವರ್ಷ, ವಣಕನಹಳ್ಳಿ, ಆನೇಕಲ್ ತಾಲ್ಲೋಕ್‌ರವರು ತನಗೆ ದಿನಾಂಕ 9–5–2005ರಂದು ಉಂಟಾಗಿದ್ದ ಸುಟ್ಟ ಗಾಯಗಳ ಬಗ್ಗೆ ವಿಕ್ಟೋರಿಯಾ ಆಸ್ಪತ್ರೆಯಲ್ಲಿ ಚಿಕಿತ್ಸೆ ಪಡೆಯುತ್ತಿದ್ದಾಗ, ದಿನಾಂಕ 10–5–2005ರಂದು ವಿಕ್ಟೋರಿಯಾ ಆಸ್ಪತ್ರೆಯ ಪೊಲೀಸ್ ಠಾಣೆಯ ಎಸ್.ಹೆಚ್.ಓ.ಹೆಚ್.ಸಿ. 2458ರವರ ಮುಂದೆ ರೂಪ ಹೇಳಿಕೆ ನೀಡಿರುತ್ತಾರೆ. ಸದರಿ ಹೇಳಿಕೆಯಲ್ಲಿ ಆಕೆಯ ಗಂಡ ಮತ್ತು ಮಾವರವರು ಆಕೆಗೆ ಹೆಚ್ಚಿನ ಹಣ, ವಾಚು, ಉಂಗುರ ವರದಕ್ಷಿಣೆ ತರಲು ಕಿರುಕುಳ ನೀಡುತ್ತಿದ್ದು, ದಿನಾಂಕ 9–5–2005ರಂದು ಸಂಜೆ 5–00 ಗಂಟೆಯಲ್ಲಿ ಈ ಹೆಚ್ಚಿನ ವರದಕ್ಷಿಣೆ ತರಲಿಲ್ಲ ಅಂತ ಬೈದು, ನೀನು ಯಾರನ್ನೊ ಇಟ್ಟುಕೊಂಡಿದ್ದೀಯಾ ಅಂತಾ ಹೊಡೆದು, ಮಾವ ಸೀಮೆಎಣ್ಣೆ ಸುರಿದ, ಗಂಡ ಬೆಂಕಿ ಹಚ್ಚಿದ, ನೀನು ಸಾಯಿ ಅಂತ ಹೇಳಿ ಓಡಿಹೋದರು. ಅಕ್ಕಪಕ್ಕದವರು ನನಗೆ ಆಸ್ಪತ್ರೆಗೆ ಸೇರಿಸಿದರೆಂದು ಹೇಳಿಕೆ ನೀಡಿರುತ್ತಾರೆ. ಇದನ್ನು ಸದರಿ ಎಸ್.ಹೆಚ್.ಓ. ಹೆಚ್.ಸಿ. ರವರು ಆನೇಕಲ್ ಪೊಲೀಸ್ ಠಾಣೆಗೆ ಕಳುಹಿಸಿಕೊಟ್ಟದ್ದು ಅದನ್ನು ಶ್ರೀ ವಜೀರ್, ಪಿ.ಎಸ್.ಐ. ಆನೇಕಲ್ ಪೊಲೀಸ್ ಠಾಣೆಯವರಾದ ನೀವು ಪಡೆದುಕೊಂಡು ಅಂದೇ ಅಂದರೆ 10–5–2005ರಂದು

ಮೊಕದ್ದಮೆ ಸಂಖ್ಯೆ 91/2005 ಕಲಂ 498ಎ, 307 ರೆಡ್ ವಿತ್ 34 ಐ.ಪಿ.ಸಿ. ರೀತ್ಯಾ ಪ್ರಕರಣವನ್ನು ದಾಖಲು ಮಾಡಿಕೊಂಡು, ದಿನಾಂಕ 11–5–2005ರಂದು ಕೃತ್ಯ ನಡೆದ ಸ್ಥಳಕ್ಕೆ ಭೇಟಿ ನೀಡಿ ಸ್ಥಳ ಪಂಚನಾಮೆಯನ್ನು ನಡೆಸಿ, ಸ್ಥಳದಲ್ಲಿದ್ದ ಸೀಮೆ ಎಣ್ಣೆ ಕ್ಯಾನ್, ಸುಟ್ಟ ಬಟ್ಟೆ, ಬೆಂಕಿ ಪೊಟ್ಟಣ ಅಮಾನತ್ತು ಮಾಡಿಕೊಂಡು ಕೇಸಿನ ಸಾಕ್ಷಿಗಳಾದ ಧನಮ್ಮ, ಮುರಳಿ, ರಾಮಯ್ಯ ರವರನ್ನು ವಿಚಾರಣೆ ಮಾಡಿ ಹೇಳಿಕೆ ಪಡೆದುಕೊಂಡಿರುತ್ತೀರಿ.

ದಿನಾಂಕ 13–5–2005ರಂದು ವಿಕ್ಟೋರಿಯಾ ಆಸ್ಪತ್ರೆಯಲ್ಲಿ ಚಿಕಿತ್ಸೆ ಪಡೆಯುತ್ತಿದ್ದ ರೂಪಾಳು ಚಿಕಿತ್ಸೆ ಫಲಕಾರಿಯಾಗದೆ ಮೃತಪಟ್ಟಿರುತ್ತಾರೆ ಎಂದು ವೈದ್ಯಾಧಿಕಾರಿಗಳು ನೀಡಿದ ವರ್ತಮಾನದ ಮೇರೆಗೆ ನೀವು ಸದರಿ ಪ್ರಕರಣಕ್ಕೆ ಕಲಂ 304(ಬಿ) ಐಪಿಸಿ ಸೇರಿಸಿ ಮರು ಪ್ರಥಮ ವರ್ತಮಾನ ವರದಿಯನ್ನು ದಾಖಲಿಸಿರುತ್ತೀರಿ.

ಸದರಿ ಪ್ರಕರಣವನ್ನು ಹೆಚ್ಚಿನ ತನಿಖೆಗಾಗಿ ಸಿಓಡಿಗೆ ವಹಿಸಲಾಗಿದ್ದು ಸಿಓಡಿ ತನಿಖಾಧಿಕಾರಿಗಳು ಕೃತ್ಯ ನಡೆದ ಸ್ಥಳಕ್ಕೆ ಭೇಟಿ ನೀಡಿ ಸ್ಥಳ ಪರಿಶೀಲನೆ ಮಾಡಿ ಸಾಕ್ಷಿದಾರರ ಹೇಳಿಕೆಗಳನ್ನು ಸಂಗ್ರಹಿಸಿದ್ದು ತನಿಖೆಯನ್ನು ಪೂರ್ಣಗೊಳಿಸಿ ಆರೋಪಿಗಳ ವಿರುದ್ಧ ನ್ಯಾಯಾಲಯಕ್ಕೆ ದೋಷಾರೋಪಣೆ ಪಟ್ಟಿಯನ್ನು ಸಲ್ಲಿಸಿರುತ್ತಾರೆ. ನೀವು ಸದರಿ ಪ್ರಕರಣದಲ್ಲಿ ಪ್ರಾಥಮಿಕ ತನಿಖೆ ಮಾಡಿದಾಗ ಪ್ರತ್ಯಕ್ಷ ಸಾಕ್ಷಿಗಳಾದ ಶ್ರೀಮತಿ ಧನಮ್ಮ, ಮುರುಳಿ ಮತ್ತು ರಾಮಯ್ಯ ರವರನ್ನು ವಿಚಾರಣೆ ಮಾಡಿ ಹೇಳಿಕೆ ಪಡೆಯಲಾಗಿದ್ದು, ಅವರ ಹೇಳಿಕೆಯಲ್ಲಿ ಧನಮ್ಮರವರ ಹೆಸರು ಆಕೆಯ ಗಂಡನ ಹೆಸರು ಮತ್ತು ವಯಸ್ಸನ್ನು ತಪ್ಪಾಗಿ ಬರೆದುಕೊಂಡಿರುತ್ತೀರಿ. ನಂತರ ಮುರುಳಿ ರವರ ಹೆಸರು ತಂದೆ ಹೆಸರು ಮತ್ತು ವಯಸ್ಸು ತಪ್ಪಾಗಿ ಬರೆದುಕೊಂಡಿರುತ್ತೀರಿ. ಸಾಕ್ಷಿ ಧನಮ್ಮ, ಮುರುಳಿ ಮತ್ತು ರಾಮಯ್ಯರವರ ಹೇಳಿಕೆ ಪಡೆದಾಗ ಅವರನ್ನು ನೀವು ಖುದ್ದಾಗಿ ವಿಚಾರಣೆ ಮಾಡದೆ ಕೇವಲ ಪ್ರಥಮ ವರ್ತಮಾನ ವರದಿಯಲ್ಲಿ ಬರೆದಿದ್ದಂತಹ ಆಪಾದನೆಗಳಿಗೆ ಅನುಗುಣವಾಗಿ ಅವರ ಹೇಳಿಕೆಯನ್ನು ಕಾಟಾಚಾರಕ್ಕೆ ಬರೆದುಕೊಂಡಿದ್ದು, ಅವರು ಮೃತಳು ತಾನೇ ಸೀಮೆ ಎಣ್ಣೆ ಸುರಿದುಕೊಂಡು ಬೆಂಕಿ ಹಚ್ಚಿಕೊಂಡು ಚೀರಿದಾಗ ಬಂದು ನೋಡಿದ್ದಾಗಿ ಹೇಳಿದ ನಿಜಾಂಶವನ್ನು ಬರೆದುಕೊಂಡಿರುವುದಿಲ್ಲ. ದಿನಾಂಕ 9–5–2005 ರಿಂದ 13–5–2005 ರವರೆಗೆ ಮೃತಳು ಆಸ್ಪತ್ರೆಯಲ್ಲಿ ಸಾಯುವ ತನಕ ತಾಲ್ಲೋಕು ದಂಡಾಧಿಕಾರಿಗಳ ಕಡೆಯಿಂದ ಮೃತಳ ಮರಣಪೂರ್ವ ಹೇಳಿಕೆಯನ್ನು ಮಾಡಿಸಿರುವುದಿಲ್ಲ. ನೀವು ಈ ಪ್ರಕರಣದ ಆರೋಪಿ ಎ–1 ಮತ್ತು ಎ–2 ರವರನ್ನು ದಸ್ತಗಿರಿ ಮಾಡಿರುವುದಿಲ್ಲ. ನೀವು ಈ ಪ್ರಕರಣದಲ್ಲಿ ಸೀಮೆಎಣ್ಣೆ ಕ್ಯಾನ್ ಮತ್ತು ಸುಟ್ಟ ಬಟ್ಟೆಗಳನ್ನು ಜಪ್ತಿ ಮಾಡಿದ್ದು, ಅವುಗಳನ್ನು 15 ದಿನಗಳು ವಿಳಂಬವಾಗಿದ್ದರೂ ಪರೀಕ್ಷೆಗಾಗಿ ನ್ಯಾಯ ವಿಜ್ಞಾನ ಪ್ರಯೋಗಾಲಯಕ್ಕೆ ಕಳುಹಿಸದೆ, ನಿಮ್ಮ ಕರ್ತವ್ಯದಲ್ಲಿ ತೀವ್ರ ನಿರ್ಲಕ್ಷತೆ ಮತ್ತು ಬೇಜವಾಬ್ದಾರಿತನ ಪ್ರದರ್ಶಿಸಿರುತ್ತೀರಿ.

**ಶ್ರೀ ಪ್ರೇಮಸಾಯಿ ಜಿ. ರೈ, ಪೊಲೀಸ್ ಇನ್ಸ್‌ಪೆಕ್ಟರ್, ಅತ್ತಿಬೆಲೆ ವೃತ್ತ:**

ನೀವು, ದಿನಾಂಕ 8–12–2004 ರಿಂದ 24–6–2005ರವರೆಗೆ ಆನೇಕಲ್ ವೃತ್ತದ ಪ್ರಭಾರ ನಿರ್ವಹಿಸುತ್ತಿದ್ದ ಅವಧಿಯಲ್ಲಿ, ದಿನಾಂಕ 13–5–2005 ರಂದು ಆನೇಕಲ್ ಪೊಲೀಸ್ ಠಾಣೆಯ ಮೊಕದ್ದಮೆ ಸಂಖ್ಯೆ 91/2005 ಕಲಂ 498ಎ, 304ಬಿ, 307 ರೆಡ್‌ವಿತ್ 34 ಐ.ಪಿ.ಸಿ. ರೀತ್ಯ ಪ್ರಕರಣವು ದಾಖಲಾದ ಕೂಡಲೇ ತಾವು ಪೊಲೀಸ್ ಮ್ಯಾನುಯಲ್–2 ಆದೇಶ 1216ರ ಪ್ರಕಾರ ಘೋರ ಅಪರಾಧಗಳ ಬಗ್ಗೆ ಶೀಘ್ರ ತನಿಖೆ ಕೈಗೊಳ್ಳುವ ಜವಾಬ್ದಾರಿ ವೃತ್ತ ನಿರೀಕ್ಷಕರವರದಾಗಿದ್ದು ಈ ವರದಕ್ಷಿಣೆ ಸಾವಿನ ಪ್ರಕರಣವು ಗಂಭೀರ ಸ್ವರೂಪ ಪ್ರಕರಣವೆಂದು ಗೊತ್ತಿದ್ದರೂ ಸಹ ನೀವು ಈ ಪ್ರಕರಣವು ದಾಖಲಾದ ದಿನಾಂಕದಿಂದ (10–5–2005) ಡಿ.ಎಸ್.ಪಿ. ರವರು ತನಿಖೆಯನ್ನು ವಹಿಸಿಕೊಳ್ಳುವರೆಗೆ ಈ ಪ್ರಕರಣದ ಮುಂದಿನ ತನಿಖೆಯನ್ನು ಕೈಗೊಂಡಿರುವುದಿಲ್ಲ. ಕೃತ್ಯ ನಡೆದ ಸ್ಥಳಕ್ಕೆ ಭೇಟಿ ನೀಡಿ ಸ್ಥಲ ಪರಿಶೀಲನೆ ಮಾಡಿರುವುದಿಲ್ಲ. ಮೃತಳ ರಕ್ತ ಸಂಬಂಧಿಕರನ್ನು ಹಾಗೂ ಯಾವುದೇ ಪ್ರತ್ಯಕ್ಷ ಹಾಗೂ ಇತರೆ ಸಾಕ್ಷಿಗಳನ್ನು ವಿಚಾರಣೆ ಮಾಡಿರುವುದಿಲ್ಲ. ಆರೋಪಿಗಳನ್ನು ದಸ್ತಗಿರಿ ಮಾಡುವ ಬಗ್ಗೆ ಕ್ರಮ ಕೈಗೊಂಡಿರುವುದಿಲ್ಲ. ನೀವು ಖುದ್ದಾಗಿ ಆಸ್ಪತ್ರೆಗೆ ಭೇಟಿ ನೀಡಿ ಗಾಯಾಳುವನ್ನು ಘಟನೆಯ ಬಗ್ಗೆ ಕೂಲಂಕುಶವಾಗಿ ವಿಚಾರಣೆ ಮಾಡಿರುವುದಿಲ್ಲ. ತಹಶೀಲ್ದಾರ್‌ರವರ ಕಡೆಯಿಂದ ಗಾಯಾಳುವಿನ ಮರಣಪೂರ್ವ ಹೇಳಿಕೆ ಮಾಡಿಸಲು ಕ್ರಮ ಕೈಗೊಂಡಿರುವುದಿಲ್ಲ. ಸದರಿ ಪ್ರಕರಣದಲ್ಲಿ ಜಪ್ತಿ ಮಾಡಲಾಗಿದ್ದ ಸೀಮೆಎಣ್ಣೆ ಕ್ಯಾನ್ ಮತ್ತು ಸುಟ್ಟ ಬಟ್ಟೆಗಳನ್ನು ಎಫ್.ಎಸ್.ಎಲ್. ಪರೀಕ್ಷೆಗೆ ಕೂಡಲೇ ಕಳುಹಿಸಲು ಕ್ರಮ ಕೈಗೊಂಡಿರುವುದಿಲ್ಲ. ಸದರಿ ಪ್ರಕರಣದಲ್ಲಿ ಪಿಎಸ್‌ಐರವರು ಮೂರು ಜನ ಸಾಕ್ಷಿಗಳಾದ ಧನಮ್ಮ, ಮುರಳಿ ಮತ್ತು ರಾಮಯ್ಯ ರವರ ಹೆಸರು, ಅವರ ತಂದೆಯ ಹೆಸರು ಮತ್ತು ಅವರ ಹೇಳಿಕೆಯ ಅಂಶಗಳನ್ನು ತಪ್ಪಾಗಿ ಬರೆದಿರುವುದನ್ನು ಗಮನಿಸಿ ಅವುಗಳನ್ನು ಸರಿಪಡಿಸಲು ಯಾವುದೇ ಕ್ರಮ ಕೈಗೊಂಡಿರುವುದಿಲ್ಲ. ಈ ಕೇಸಿನ ತನಿಖೆಯಲ್ಲಿ ಪಿಎಸ್‌ಐ ರವರಿಗೆ ಯಾವುದೇ ಮಾರ್ಗದರ್ಶನ ನೀಡದೆ ಹಾಗೂ ತನಿಖೆಯ ಮೇಲ್ವಿಚಾರಣೆಯನ್ನು ಮಾಡದೇ ತಾವು ಸಹ ತನಿಖೆಯನ್ನು ನಿರ್ವಹಿಸದೇ ನಿಮ್ಮ ಕರ್ತವ್ಯದಲ್ಲಿ ತೀವ್ರ ನಿರ್ಲಕ್ಷತೆ ಮತ್ತು ಬೇಜಾವಾಬ್ದಾರಿತನ ಪ್ರದರ್ಶಿಸಿರುತ್ತೀರಿ.

**ಶ್ರೀ ಸುರೇಂದ್ರರಾವ್, ಹಾಲಿ ಎಸಿಪಿ, ಶೇಷಾದ್ರಿಪುರಂ ಉಪ ವಿಭಾಗ, ಬೆಂಗಳೂರು:**

ನೀವು ಹಿಂದೆ ಡಿಎಸ್‌ಪಿ ಯಾಗಿ ಬೆಂಗಳೂರು ಉಪ ವಿಭಾಗದಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಆನೇಕಲ್ ಪೊಲೀಸ್ ಠಾಣೆಯ ಮೊ.ಸಂ. 91; 2005 ಕಲಂ 498(ಎ)307–304(ಬಿ)ಐಪಿಸಿ ಪ್ರಕರಣವು ದಾಖಲಾಗಿದ್ದು, ಸದರಿ ಪ್ರಕರಣದಲ್ಲಿ ಸಿಓಡಿ ತನಿಖಾ ಕಾಲದಲ್ಲಿ ಈ ಕೆಳಕಂಡ ಕರ್ತವ್ಯ ಲೋಪಗಳನ್ನು ಎಸಗಿರುವುದು ಕಂಡು ಬಂದಿರುತ್ತದೆ.

1. ಸ್ಥಾಯಿ ಆದೇಶ ಸಂ. 4787ರ ಪ್ರಕಾರ ಮಹಿಳೆ ಮದುವೆಯಾದ 5 ವರ್ಷದೊಳಗೆ ಅನುಮಾನಾಸ್ಪದವಾಗಿ ಮರಣ ಹೊಂದಿದ ಪ್ರಕರಣಗಳಲ್ಲಿ ಕೂಡಲೇ ಡಿ.ಎಸ್.ಪಿ. ದರ್ಜೆಯ ಅಧಿಕಾರಿಗಳು ತನಿಖೆಯನ್ನು ವಹಿಸಿಕೊಳ್ಳಬೇಕೆಂದು ನಿರ್ದೇಶನವಿದ್ದರೂ ಸಹ, ತಮ್ಮ ವ್ಯಾಪ್ತಿಯೊಳಗೆ ದಿನಾಂಕ 9–5–2005 ರಂದು ರಾತ್ರಿ ಶ್ರೀಮತಿ ರೂಪ, 20 ವರ್ಷ, ವಣಕನಹಳ್ಳಿ, ಆನೇಕಲ್ ತಾಲ್ಲೋಕು ರವರು ವರದಕ್ಷಿಣೆ ಕಿರುಕುಳದಿಂದ ಸುಟ್ಟುಕೊಂಡ ಬಗ್ಗೆ ವಿಕ್ಟೋರಿಯಾ ಆಸ್ಪತ್ರೆಯಲ್ಲಿ ಚಿಕಿತ್ಸೆ ಪಡೆಯುತ್ತಿದ್ದಾಗ ದಿನಾಂಕ 13–5–2005ರಂದು ಮೃತಪಟ್ಟಿರುತ್ತಾರೆ ಎಂದು ಬಂದ ವರ್ತಮಾನದ ಮೇರೆಗೆ ಆನೇಕಲ್ ಪೊಲೀಸ್ ಠಾಣೆಯಲ್ಲಿ ದಾಖಲಾಗಿರುವ ಮೊಕದ್ದಮೆ ಸಂಖ್ಯೆ 91/2005 ಕಲಂ 498ಎ, 207, 304ಬಿ ಐ.ಪಿ.ಸಿ. ಪ್ರಕರಣದಲ್ಲಿ ಕೂಡಲೇ ತನಿಖೆಯನ್ನು ಕೈಗೊಂಡಿರುವುದಿಲ್ಲ. ಖುದ್ದಾಗಿ ಕೃತ್ಯ ಸ್ಥಳಕ್ಕೆ ಭೇಟಿ ನೀಡಿ ಪರಿಶೀಲನೆ ನಡೆಸಿರುವುದಿಲ್ಲ.

2. ಪಿ.ಎಸ್.ಐ. ರವರು ಕೇಸಿನ ಪ್ರತ್ಯಕ್ಷ ಸಾಕ್ಷಿಗಳಾದ ಧನಮ್ಮ, ಮುರುಳಿ ಮತ್ತು ರಾಮಯ್ಯರವರ ಹೆಸರು ಮತ್ತು ತಂದೆಯ ಹೆಸರು ಹಾಗೂ ಅವರ ಹೇಳಿಕೆ ಅಂಶಗಳನು ತಪ್ಪಾಗಿ ಬರೆದುಕೊಂಡಿರುವುದನ್ನು ಸರಿಪಡಿಸಲು ಕ್ರಮ ಕೈಗೊಂಡಿರುವುದಿಲ್ಲ.

3. ತಾವೇ ಖುದ್ದಾಗಿ ಪ್ರತ್ಯಕ್ಷ ಸಾಕ್ಷಿಗಳನ್ನು ಮತ್ತು ಮೃತಳ ರಕ್ತ ಸಂಬಂಧಿಕರನ್ನು ವಿಚಾರಣೆ ಮಾಡಿ ಘಟನೆಯ ಸತ್ಯಾಂಶದ ಬಗ್ಗೆ ಹೇಳಿಕೆಗಳನ್ನು ಮಾಡಿಕೊಂಡಿರುವುದಿಲ್ಲ. ಹಾಗೂ ಗಾಯಾಳುವಿಗೆ ಖುದ್ದಾಗಿ ವಿಚಾರಿಸಿ ಆಕೆಯ ಹೇಳಿಕೆ ಮಾಡಿಕೊಂಡಿರುವುದಿಲ್ಲ.

4. ಮೃತಳು ಆಸ್ಪತ್ರೆಯಲ್ಲಿ ಚಿಕಿತ್ಸೆ ಪಡೆಯುತ್ತಿದ್ದಾಗ ತಾಲ್ಲೋಕು ದಂಡಾಧಿಕಾರಿಗಳ ಕಡೆಯಿಂದ ಮೃತಳ ಮರಣಪೂರ್ವ ಹೇಳಿಕೆಯನ್ನು ಮಾಡಿಸುವ ಬಗ್ಗೆ ಕ್ರಮ ಕೈಗೊಂಡಿರುವುದಿಲ್ಲ. ಆರೋಪಿ ಎ–1 ಮತ್ತು ಎ–2 ರವರನು ದಸ್ತಗಿರಿ ಮಾಡುವ ಬಗ್ಗೆ ಕ್ರಮವನ್ನು ಕೈಗೊಂಡಿರುವುದಿಲ್ಲ.

5. ಸದರಿ ಪ್ರಕರಣದಲ್ಲಿ ಜಪ್ತಿ ಮಾಡಿದ ಸೀಮೆಎಣ್ಣೆ ಕ್ಯಾನ್ ಮತ್ತು ಸುಟ್ಟಿದ ಬಟ್ಟೆಗಳನ್ನು 15 ದಿನ ವಿಳಂಬವಾಗಿದ್ದರೂ ನ್ಯಾಯ ವಿಜ್ಞಾನ ಪ್ರಯೋಗಾಲಯಕ್ಕೆ ಕಳುಹಿಸಿರುವುದಿಲ್ಲ. ಈ ಸಿಓಡಿ ತನಿಖಾಧಿಕಾರಿ ಕೇಳಿದ್ದಕ್ಕೆ ಅವುಗಳನ್ನು ಎಫ್.ಎಸ್.ಎಲ್. ಕಳುಹಿಸುವ ಕೆಲಸ ನನ್ನದ್ದಲ್ಲ ಅಂತ ತಿರಸ್ಕರಿಸಿರುತ್ತೀರಿ.

6. ದಿನಾಂಕ 17–5–2004ರಂದು ಬರೆದ ಸಿ.ಡಿ.ಯಲ್ಲಿ ಎಲ್ಲಾ ತನಿಖೆಯನ್ನು ಒಂದೇ ದಿನ ಕಾಟಾಚಾರಕ್ಕೆ ತನಿಖೆ ಮಾಡಿದಂತೆ ಬರೆದಿರುತ್ತೀರಿ.

7. ಈ ಪ್ರಕರಣದ ತನಿಖೆಯಲ್ಲಿ ಪಿ.ಎಸ್.ಐ. ಹಾಗೂ ಸಿ.ಪಿ.ಐ. ರವರಿಗೆ ಉಪಯುಕ್ತ ಮಾರ್ಗದರ್ಶನ ಮಾಡದೇ, ಸಮರ್ಪಕವಾದ ಮೇಲ್ವಿಚಾರಣೆಯನು ಮಾಡದೇ, ತಾವು ತನಿಖೆಯನ್ನು ನಿರ್ವಹಿಸದೇ ನಿಮ್ಮ ಕರ್ತವ್ಯದಲ್ಲಿ ಅತೀವ ನಿರ್ಲಕ್ಷತೆ ಹಾಗೂ ಬೇಜಾವಾಬ್ದಾರಿತನ ಪ್ರದರ್ಶಿಸಿರುತ್ತೀರಿ.

ಈ ಇಲಾಖಾ ವಿಚಾರಣೆಯನ್ನು ನಡೆಸಲು ಪೊಲೀಸ್ ಅಧೀಕ್ಷಕರು ಹಾಗೂ ಸಾರ್ವಜನಿಕ ಸಂಪರ್ಕಾಧಿಕಾರಿ, ಪ್ರಧಾನ ಕಛೇರಿ, ಬೆಂಗಳೂರು ಇವರನ್ನು ವಿಶೇಷ ಅಧಿಕಾರ ಹೊಂದಿದ ವಿಚಾರಣಾಧಿಕಾರಿಯೆಂದು ನೇಮಿಸಲಾಗಿತ್ತು.

ಡೈರೆಕ್ಟರ್ ಜನರಲ್ ಮತ್ತು ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಬೆಂಗಳೂರು ಇವರು ಓದಲಾದ (2)ರ ಪತ್ರದಲ್ಲಿ ಇಲಾಖಾ ವಿಚಾರಣಾಧಿಕಾರಿಗಳ ಅಂತಿಮ ವರದಿಯನ್ನು ಸರ್ಕಾರಕ್ಕೆ ಕಳುಹಿಸಿರುತ್ತಾರೆ. ವಿಚಾರಣಾಧಿಕಾರಿಗಳು ಅಭಿಯೋಗದ ಪರವಾಗಿ 22 ದಾಖಲೆಗಳನ್ನು ಗುರುತಿಸಿದ್ದು, ಅಭಿಯೋಗದ ಪರವಾಗಿ 7 ಸಾಕ್ಷಿದಾರರ ಹೇಳಿಕೆಗಳನ್ನು ಪಡೆದುಕೊಂಡಿರುತ್ತಾರೆ. ಆಪಾದಿತ ಪೊಲೀಸ್ ಅಧಿಕಾರಿಗಳ ಮೌಖಿಕ ಹೇಳಿಕೆಗಳು/ಲಿಖಿತ ಹೇಳಿಕೆಗಳು 7 ರಕ್ಷಣಾ ದಾಖಲೆಗಳನ್ನು ಹಾಗೂ 6 ಆರೋಪಿತ ಪೊಲೀಸ್ ಅಧಿಕಾರಿಗಳಿಂದ ವಿವಿಧ ಹಂತದಲ್ಲಿ ಹೇಳಿಕೆಗಳನ್ನು ಪಡೆದು ಪರಿಶೀಲಿಸಿ ಆರೋಪಿತ ಪೊಲೀಸ್ ಅಧಿಕಾರಿಗಳ ವಿರುದ್ಧ ಹೊರಸಲಾದ ದೋಷಾರೋಪಣೆಗಳು ಸಾಬೀತಾಗಿರುವುದಿಲ್ಲವೆಂದು ವರದಿಯನ್ನು ನೀಡಿರುತ್ತಾರೆ.

1) **ಆ.ಪೊ.ಅ.–1:** ಶ್ರೀ ವಜೀರ್, ಪೊಲೀಸ್ ಸಬ್ ಇನ್ಸ್‌ಪೆಕ್ಟರ್, ಆನೇಕಲ್ ಪೊಲೀಸ್ ಠಾಣೆ ಇವರ ವಿರುದ್ಧ 5 ಆರೋಪವನ್ನು ಹೊರಸಲಾಗಿದ್ದು ಇವುಗಳು ಸಾಬೀತಾಗಿರುವುದಿಲ್ಲವೆಂದು ವಿಚಾರಣಾಧಿಕಾರಿಗಳು ವರದಿ ಮಾಡಿರುತ್ತಾರೆ.

2) **ಆ.ಪೊ.ಅ.–2:** ಶ್ರೀ ಪ್ರೇಮಸಾಯಿ ಜಿ. ರೈ. ಪೊಲೀಸ್ ಇನ್ಸ್‌ಪೆಕ್ಟರ್, ಅತ್ತಿಬೆಲೆ ವೃತ್ತ ಇವರ ವಿರುದ್ಧ 8 ಆರೋಪಗಳನ್ನು ಹೊರಸಲಾಗಿದ್ದು ಇವುಗಳು ಸಾಬೀತಾಗಿರುವುದಿಲ್ಲವೆಂದು ವಿಚಾರಣಾಧಿಕಾರಿಗಳು ವರದಿ ಮಾಡಿರುತ್ತಾರೆ.

3) **ಆ.ಪೊ.ಅ.-3:** ಶ್ರೀ ಸುರೇಂದ್ರರಾವ್, ಡಿ.ವೈ.ಎಸ್.ಪಿ., ಶೇಷಾದ್ರಿಪುರಂ ಉಪ ವಿಭಾಗ, ಬೆಂಗಳೂರು ಇವರ ವಿರುದ್ಧ 7 ಆರೋಪಗಳನ್ನು ಹೊರಿಸಲಾಗಿದ್ದು ಇವುಗಳು ಸಾಬೀತಾಗಿರುವುದಿಲ್ಲವೆಂದು ವಿಚಾರಣಾಧಿಕಾರಿಗಳು ವರದಿ ಮಾಡಿರುತ್ತಾರೆ.

ಪ್ರಸ್ತಾವನೆಯನು ಕೂಲಂಕಷವಾಗಿ ಪರಿಶೀಲಿಸಿದ ಸರ್ಕಾರವು ವಿಚಾರಣಾಧಿಕಾರಿಗಳ ವರದಿಯನ್ನು ಒಪ್ಪಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಒಇ 438 ಪೊಸಿಪ 2006, ಬೆಂಗಳೂರು, ದಿನಾಂಕ: 26ನೇ ಜೂನ್ 2008.**

ಆನೇಕಲ್ ಪೊಲೀಸ್ ಠಾಣೆಯ ಮೊ.ಸಂ. 91/05ರ ತನಿಖೆಯಲ್ಲಿ ಲೋಪವೆಸಗಿದ ಕುರಿತಂತೆ ಈ ಕೆಳಕಂಡ ಪೊಲೀಸ್ ಅಧಿಕಾರಿಗಳನ್ನು ಅವರ ಮೇಲೆ ಹೊರಿಸಲಾದ ದೋಷಾರೋಪಣೆಗಳಿಂದ ದೋಷಮುಕ್ತಗೊಳಿಸಿ ಆದೇಶಿಸಲಾಗಿದೆ.

i) ಶ್ರೀ ವಜೀರ್, ಪೊಲೀಸ್ ಸಬ್ ಇನ್ಸ್‌ಪೆಕ್ಟರ್, ಆನೇಕಲ್ ಪೊಲೀಸ್ ಠಾಣೆ

ii) ಶ್ರೀ ಪ್ರೇಮಸಾಯಿ ಜಿ. ರೈ. ಪೊಲೀಸ್ ಇನ್ಸ್‌ಪೆಕ್ಟರ್, ಅತ್ತಿಬೆಲೆ ವೃತ್ತ

iii) ಶ್ರೀ ಸುರೇಂದ್ರರಾವ್, ಡಿವೈ.ಎಸ್.ಪಿ. ಶೇಷಾದ್ರಿಪುರಂ ಉಪ ವಿಭಾಗ, ಬೆಂಗಳೂರು

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 980

**ಆರ್.ಎ. ಕುಲಕರ್ಣಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

## ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ

**ವಿಷಯ :** ಸಕ್ಕರೆ ಕಾರ್ಖಾನೆಗಳ ವ್ಯಾಪ್ತಿಯಲ್ಲಿರುವ ರಸ್ತೆಗಳ ಕಾಮಗಾರಿ ಅನುಷ್ಠಾನಕ್ಕಾಗಿ 2008-09ನೇ ಸಾಲಿನ ಅನುದಾನ ಬಿಡುಗಡೆ ಮಾಡುವ ಕುರಿತು.

**ಓದಲಾಗಿದೆ:** 1. ಆಯುಕ್ತರು, ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರು ರವರ ಪತ್ರ ಸಂಖ್ಯೆ ಡಿಎಸ್‌ಕೆ/ರಕರ/ಅನುಧಾನನ/2008-09, ದಿನಾಂಕ 25-4-2008.

2. ಸರ್ಕಾರ ಆದೇಶ ಸಂಖ್ಯೆ: ವಾಕೈ 108 ಆಂಆಸ(1) 08, ದಿನಾಂಕ 11-4-2008.

**ಪ್ರಸ್ತಾವನೆ :**

ರಾಜ್ಯದ ಈ ಕೆಳಕಂಡ ಸಕ್ಕರೆ ಕಾರ್ಖಾನೆಗಳ ವ್ಯಾಪ್ತಿಯಲ್ಲಿರುವ ರಸ್ತೆಗಳ ಕಾಮಗಾರಿಗಳ ಅನುಷ್ಠಾನಕ್ಕಾಗಿ 2008-08ನೇ ಸಾಲಿನಲ್ಲಿ ಒದಗಿಸಲಾಗಿರುವ 160.00 ಲಕ್ಷ ರೂಗಳಲ್ಲಿ ರೂ. 159.78 ಲಕ್ಷಗಳನ್ನು ಬಿಡುಗಡೆಗೊಳಿಸಲು ಸಕ್ಕರೆ ನಿರ್ದೇಶಕರು ಮೇಲೆ ಓದಲಾದ (1)ರ ದಿನಾಂಕ 25-4-2008ರ ಪತ್ರದಲ್ಲಿ ಪ್ರಸ್ತಾಪಿಸಿದ್ದಾರೆ.

(ರೂ.ಲಕ್ಷಗಳಲ್ಲಿ)

| ಕ್ರ.ಸಂ. | ಕಾರ್ಖಾನೆಯ ಹೆಸರು | ವರ್ಷ | ಮೊತ್ತ |
|---|---|---|---|
| 1 | ಕರ್ನಾಟಕ ಸಹಕಾರಿ ಸಕ್ಕರೆ ಕಾರ್ಖಾನೆ | 1998-1999 | 2.00 |
| 2 | ನಂದಿ ಸಹಕಾರಿ ಸಕ್ಕರೆ ಕಾರ್ಖಾನೆ (ನಿ) | 1999-2000 | 29.23 |
| 3 | ಗೋದಾವರಿ ಸಕ್ಕರೆ ಕಾರ್ಖಾನೆ (ನಿ) (ಚಿಕ್ಕೋಡಿ ವಿಭಾಗ) | 1999-2000 | 32.69 |
| 4 | ರೈತರ ಸಹಕರಿ ಸಕ್ಕರೆ ಕಾರ್ಖಾನೆ (ನಿ) | 1999-2000 | 17.00 |
| 5 | ಹಿರಣ್ಯಕೇಶಿ ಸಹಕಾರಿ ಸಕ್ಕರೆ ಕಾರ್ಖಾನೆ (ನಿ) | 1999-2000 | 43.40 |
| 6 | ಐ.ಎಸ್.ಆರ್. ಶುಗರ್ಸ್ (ಲಿ) | 2000-2001 | 14.18 |
| 7 | ಶ್ಯಾಮನೂರು ಶುಗರ್ಸ್ (ಲಿ) | 2000-2001 | 21.28 |
| | **ಒಟ್ಟು** | | **159.78** |

ಮೇಲೆ ಓದಲಾದ (2)ರಲ್ಲಿರುವ ಸರ್ಕಾರದ ಆದೇಶದಲ್ಲಿ 2008-09ನೇ ಸಾಲಿಗೆ ಈ ಉದ್ದೇಶಕ್ಕಾಗಿ 160/- ಲಕ್ಷ ರೂಗಳ ಅನುದಾನವನ್ನು ಇಲಾಖೆಯ ಲೆಕ್ಕಶೀರ್ಷಿಕೆ 4860-04-800-0-01-Roads-172ರ ಅಡಿಯಲ್ಲಿ ಒದಗಿಸಲಾಗಿದೆ. ಸದರಿ ಹಣದಲ್ಲಿ 159.78 ಲಕ್ಷ ರೂಗಳ ಬಿಡುಗಡೆಗೆ ಆಯುಕ್ತರು ಕಬ್ಬು ಅಭಿವೃದ್ಧಿರವರು ಉಲ್ಲೇಖಿತ (1)ರಲ್ಲಿನ ಪತ್ರದಲ್ಲಿ ಕೋರಿರುತ್ತಾರೆ.

ಆಯುಕ್ತರು ಕಬ್ಬು ಅಭಿವೃದ್ಧಿ ರವರ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಐ 93 ಎಸ್‌ಜಿಎಫ್ 08, ಬೆಂಗಳೂರು, ದಿನಾಂಕ: 24ನೇ ಜೂನ್ 2008.**

ಆಯುಕ್ತರು ಕಬ್ಬು ಅಭಿವೃದ್ಧಿ ರವರು ಪ್ರಸ್ತಾವನೆಯಲ್ಲಿ ಕೋರಿರುವಂತೆ ರಾಜ್ಯದ 7 ಸಕ್ಕರೆ ಕಾರ್ಖಾನೆಗಳ ವ್ಯಾಪ್ತಿಯಲ್ಲಿ ಬರುವ ರಸ್ತೆಗಳನ್ನು ಅಭಿವೃದ್ಧಿ ಪಡಿಸುವ ಕ್ರಿಯಾ ಯೋಜನೆಯನ್ನು ಕಾರ್ಯಗತಗೊಳಿಸಲು 2008–09ನೇ ಸಾಲಿನಲ್ಲಿ ಲೆಕ್ಕಶೀರ್ಷಿಕೆ 4860–04–800–0–01–ರಸ್ತೆಗಳು–172ರಡಿ ಒದಗಿಸಲಾಗಿರುವ 160.00 ಲಕ್ಷ ರೂಗಳ ಅನುದಾನದಲ್ಲಿ ಆರ್ಥಿಕ ಇಲಾಖೆಯು ಹೊಸದಾಗಿ ಹೊರಡಿಸಿದ ಪ್ರತ್ಯಾಯೋಜಿಸಿದ ಅಧಿಕಾರ ಆದೇಶ ಸಂಖ್ಯೆ: ಎಫ್‌ಡಿ 01 ಟಿಎಫ್‌ಪಿ 08, ದಿನಾಂಕ 16–5–2008 ಪ್ರಕಾರ ಮೊದಲ ಕಂತಿನಲ್ಲಿ ಶೇ. 25ರಷ್ಟು ಆಯವ್ಯಯದ ಅನುದಾನ ಬಿಡುಗಡೆ ಮಾಡಲು ಅವಕಾಶವಿರುವುದರಿಂದ 160 ಲಕ್ಷ ರೂಗಳ ಅನುದಾನದಲ್ಲಿ ಮೊದಲ ಕಂತಾಗಿ 40 ಲಕ್ಷ ರೂಗಳನ್ನು (ನಲವತ್ತು ಲಕ್ಷ ರೂಗಳು ಮಾತ್ರ) ಪ್ರಸ್ತಾವನೆಯಲ್ಲಿ ನಮೂದಿಸಿರುವ ಕಾರ್ಖಾನೆಗಳ ವ್ಯಾಪ್ತಿಯ ರಸ್ತೆ ಕಾಮಗಾರಿಗಳಿಗೆ ಆದ್ಯತೆ ಮೇರೆಗೆ ಬಿಡುಗಡೆ ಮಾಡುವ ಸಲುವಾಗಿ ಆಯುಕ್ತರು ಕಬ್ಬು ಅಭಿವೃದ್ಧಿ ರವರಿಗೆ ಬಿಡುಗಡೆ ಮಾಡಲಾಗಿದೆ.

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ: ಎಫ್.ಡಿ. 01 ಟಿ.ಎಫ್.ಪಿ. 2008, ದಿನಾಂಕ 16–5–2008ರಲ್ಲಿ ಸರ್ಕಾರದ ಆಡಳಿತ ಇಲಾಖಾ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಿದ ಅಧಿಕಾರದ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 981

**ಪಿ. ಆನಂದಕುಮಾರ್**
ಪೀಠಾಧಿಕಾರಿ (ಸಕ್ಕರೆ)
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

## FOREST, ECOLOGY AND ENVIRONMENT SECRETARIAT

**Sub :** Grant of permission for usage of old existing road to an extent of 1.24 ha. in Nirthadi Reserve Forest, Holalkere Range, Chitradurga Division by Sri R. Praveen Chandra, M.L. No. 1404/1903/2294.

**Read :**
1) Letter No. A5(1)MNG.CR.6/08-09, dated 12/4-5/2008 of the Principal Chief Conservator of Forests, Bangalore.
2) State Government Order No. FEE 9 FFM 2007, dated 22-12-2007.
3) Government of India guidelines No. 11-8/2001-FC, dated 15-11-2001.

**Preamble:**

The Principal Chief Conservator of Forests had sent proposal vide his letter dated 12/04-05/2008 read at (1) above for permission to use the old existing approach road in respect of mining lease No. 1404/1903/2294 of Sri R. Praveen Chandra, over an extent of 1.24 ha. of forest land in Nirthadi Reserve Forest, Holalkere Range, subject to certain conditions.

The State Government Order read at (2) above, accorded transfer of leasef in respect of M.L. No. 1404/1903/2294 over an area of 42.60 ha. of forest land located in Nirthadi Reserve Forest, Holalkere Range, Chitradurga Forest Division from Late Sri E. Ramamurthy to his legal heir Sri R. Praveen Chandra.

After careful consideration of the proposal the State Government vide Government of India guidelines read at (3) above has considered according permission to use the old existing approach road in respect of mining lease No. 1404/1903/2294 of Sri R. Praveen Chandra, over an extent of 1.24 ha. of forest land in Narthadi Reserve Forest, Halalkere Range.

The proposal has been examined in detail and hence the order.

**Govt. Order No. FEE 56 FFM 2008, Bangalore, Dated 24th May 2008**

In the Circumstances explained in the preamble above, Government are pleased to accord permission to use the old existing approach road as per the Government of India guidelines Letter No. 11-8/2001-FC, dated 15-11-2001 in respect of mining least No. 1404/1903/2294 of Sri R. Praveedn Chandra, over an extent of 1.24 ha. of forest land in Nirthadi Reserve Forest, Holalkere Range subject to the following conditions.

1) Legal status of forest land shall remain unchanged.
2) No tree felling should be allowed.

3) No widening of roads should be undertaken, without permission of the Central Government under the Forest (Conservation) Act, 1980.
4) No breaking of fresh forest land is carried out.
5) The above usage of existing road (1.24 ha) subject to the payment of Net Present Value and Compensatory afforestation as per existing practices/provisions.
6) This permission valid till the expiry of mining lease.
7) Any other condition that the State Government/Government of India/Principal Chief Conservator of Forests may impose from time to time in the interest of conservation, protection and development of forests.

By order and in the name of the President of India,

PR. 900

**AHMED A MOKHTADAR**

Deputy Secretary to Government,

Forests, Ecology and Environment Department.

**ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ**

**ಸಂಖ್ಯೆ ವಾಕೈ 24 ರೇಯೋವಿ 2007, ಬೆಂಗಳೂರು, ದಿನಾಂಕ 19ನೇ ಆಗಸ್ಟ್ 2008**

**ತಿದ್ದುಪಡಿ**

ಸರ್ಕಾರಿ ಆದೇಶ ಸಂಖ್ಯೆ: ವಾಕೈ 24 ರೇಯೋವಿ 2007, ದಿನಾಂಕ 2–4–2007ರ ಆದೇಶ ಭಾಗದಲ್ಲಿ 3ನೇ ಸಾಲಿನಲ್ಲಿರುವ ಸರ್ವೆ ನಂ. 22/2(ಎ) ಮತ್ತು 23/2(ಬಿ) ಎಂದು ಇರುವುದನ್ನು 12/1ಎ, 1ಬಿ, 12/1ಬಿ ಮತ್ತು 23/2ಎ ಎಂದು ತಿದ್ದಿ ಓದಿಕೊಳ್ಳುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1215

**ಭಾರತಿ ಆರ್. ನಾಯಕ್**

ಪೀಠಾಧಿಕಾರಿ (ರೇಷ್ಮೆ)

ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ (ಸೇವೆಗಳು)

**ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ**

**ವಿಷಯ :** ಶ್ರೀ ಎಸ್. ರಾಜಯ್ಯ, ಉಪನಿರ್ದೇಶಕರು, (ಅಮಾನತ್ತು) ಜಿಲ್ಲಾ ಕೈಗಾರಿಕಾ ಕೇಂದ್ರ, ಯಯ್ಯಾಡಿ, ಮಂಗಳೂರು ರವರ ವಿರುದ್ಧದ ಟ್ರಾಪ್ ಪ್ರಕರಣದಲ್ಲಿ ಅಭಿಯೋಜನಾ ಮಂಜೂರಾತಿ ಕುರಿತು.

**ಓದಲಾಗಿದೆ:** 1. ಅಪರ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು, ಇವರ ಪತ್ರ ಸಂಖ್ಯೆ: ಲೋಕ್/ಐಎನ್‌ವಿ(ಜಿ)/ಎಂ.18/ಸಿಆರ್–5/2007, ಮಂಗಳೂರು ದಿ: 2–6–2008.

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ಪತ್ರದಲ್ಲಿ ಅಪರ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರುರವರು ತನಿಖೆಯನ್ನು ಪೂರ್ಣಗೊಳಿಸಿರುವ ತನಿಖಾಧಿಕಾರಿಯ ಅಂತಿಮ ವರದಿಯ ಪ್ರಕಾರ ಶ್ರೀ ಎಸ್.ರಾಜಯ್ಯ, ಉಪನಿರ್ದೇಶಕರು, (ಅಮಾನತ್ತು) ಜಿಲ್ಲಾ ಕೈಗಾರಿಕಾ ಕೇಂದ್ರ, ಯಯ್ಯಾಡಿ, ಮಂಗಳೂರುರವರ ವಿರುದ್ಧ ದಾಖಲಾಗಿರುವ ಭ್ರಷ್ಟಾಚಾರ ನಿರ್ಮೂಲನಾ ಕಾಯ್ದೆ 1988ರ ಕಲಂ 7, 13(1)(ಡಿ) ಜೊತೆಗೆ ಕಲಂ 13(2)ರ ಅಡಿಯಲ್ಲಿನ ಆಪಾದನೆಗಳು ಮೇಲ್ನೋಟಕ್ಕೆ ಸಾಬೀತಾಗಿರುವುದರಿಂದ, ಸದರಿ ಅಧಿಕಾರಿಯನ್ನು ನ್ಯಾಯಾಲಯದಲ್ಲಿ ಅಭಿಯೋಜನೆಗೆ ಒಳಪಡಿಸಲು ಅರ್ಹರಿರುತ್ತಾರೆ. ಅವರನ್ನು ಅಭಿಯೋಜನೆಗೆ ಒಳಪಡಿಸಲು ಸಕ್ಷಮ ಪ್ರಾಧಿಕಾರ ಅರ್ಥಾತ್ ಸದರಿ ಆಪಾದಿತ ಸರ್ಕಾರಿ ಅಧಿಕಾರಿಯನ್ನು ಹುದ್ದೆಯಿಂದ ತೆಗೆದುಹಾಕುವ ಅಧಿಕಾರವುಳ್ಳ ಪ್ರಾಧಿಕಾರದ ಪೂರ್ವಾನುಮತಿ ಅಗತ್ಯವಾಗಿರುತ್ತದೆ.

ಆಪಾದಿತ ಸರ್ಕಾರಿ ಅಧಿಕಾರಿಯನ್ನು ಭ್ರಷ್ಟಾಚಾರ ನಿರ್ಮೂಲನಾ ಕಾಯ್ದೆ 1988ರ ಕಲಂ 7, 13(1)(ಡಿ) ಜೊತೆಗೆ ಕಲಂ 13(2)ರ ಅಡಿಯಲ್ಲಿ ಎಸಗಿರುವ ಅಪರಾಧಕ್ಕಾಗಿ ಅಭಿಯೋಜನೆಗೆ ಒಳಪಡಿಸಲು ಭ್ರಷ್ಟಾಚಾರ ನಿರ್ಮೂಲನಾ ಕಾಯ್ದೆ 1988ರ ಕಲಂ 19(1)ರ ಅನ್ವಯ ಮಂಜೂರಾತಿ ನೀಡಲು ತನಿಖಾ ವರದಿಯ ನೆರಳಚ್ಚು ಪ್ರತಿ ಪ್ರಥಮ ವರ್ತಮಾನ ವರದಿಯ ಪ್ರತಿ, ಟ್ರಾಪ್ ಪೂರ್ವದ ಮಹಜರು, ಟ್ರಾಪ್ ನಡವಳಿಗಳು ರಾಸಾಯನಿಕ ತಜ್ಞರ ವರದಿ, ವಶಪಡಿಸಿಕೊಂಡ ದಾಖಲೆಗಳ ಪ್ರತಿ, ಕೃತ್ಯ ನಡೆದ ಸ್ಥಳದ ನಕ್ಷೆ, ದಾಖಲೆಗಳ ಪ್ರತಿಗಳು ಮತ್ತು ಸಾಕ್ಷಿಗಳ ಹೇಳಿಕೆಗಳನ್ನು ಸರ್ಕಾರಕ್ಕೆ ಸಲ್ಲಿಸಿದ್ದಾರೆ.

ಅಧಿಕೃತ ಜ್ಞಾಪನ ಸಂಖ್ಯೆ: ಡಿಪಿಎಆರ್ 2 ಸೇಇವಿ 98, ದಿ: 20–7–1998ರತ್ತ ಗಮನ ಸೆಳೆಯುತ್ತಾ, ಸಕ್ಷಮ ಪ್ರಾಧಿಕಾರವು ವಿನೀತ್ ನಾರಾಯಣನ್ ಮತ್ತು ಇತರರು ಇಂಡಿಯಾ ಯೂನಿಯನ್ ಮತ್ತು ಇತರರು (1997)(10) ಇವರ

ರಿಟ್ ಅರ್ಜಿ ನಂ. 340–343/93ರ ಬಗ್ಗೆ ದಿ: 18–2–1997ರ ಸರ್ವೋಚ್ಚ ನ್ಯಾಯಾಲಯದ ತೀರ್ಮಾನದಲ್ಲಿ ನಿಗದಿಪಡಿಸಿರುವ ಕಡ್ಡಾಯ ಕಾಲಮಿತಿಯಾದ ಮೂರು ತಿಂಗಳೊಳಗಾಗಿ ಅಭಿಯೋಜನಾ ಮಂಜೂರಾತಿ ಆದೇಶವನ್ನು ಜಾರಿಗೊಳಿಸಬೇಕು ಹಾಗೂ ಅಭಿಯೋಜನಾ ಮಂಜೂರಾತಿಯ ಅಸಲು ಪ್ರತಿಯು ಸಕ್ಷಮ ಪ್ರಾಧಿಕಾರಿ ಕಛೇರಿಯ ನಡವಳಿ ರೂಪದಲ್ಲಿದ್ದು, ಅದಕ್ಕೆ ಸಕ್ಷಮ ಪ್ರಾಧಿಕಾರವು ತಮ್ಮ ಹಸ್ತಾಕ್ಷರವನ್ನು ಶಾಯಿ ಲೇಖನಿಯಲ್ಲಿ ಮಾಡಿ ಧಾರಣೆ ಮಾಡಿದ ಹುದ್ದೆಯನ್ನು ನಮೂದಿಸಿ ಕಛೇರಿ ಮೊಹರಿನೊಂದಿಗೆ ತಕ್ಷಣ ಅಪರ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರುರವರಿಗೆ ಕಳುಹಿಸುವಂತೆ ಸರ್ಕಾರಕ್ಕೆ ಕೋರಿದ್ದಾರೆ.

ಸರ್ಕಾರವು ಅಪರ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರುರವರು ಸಲ್ಲಿಸಿರುವ ಈ ಕೆಳಕಂಡ ದಾಖಲಾತಿಗಳನ್ನು ಪರಿಶೀಲಿಸಿದೆ.

1) ತನಿಖಾ ವರದಿಯ ನೆರಳಚ್ಚು ಪ್ರತಿ
2) ಪ್ರಥಮ ವರ್ತಮಾನ ವರದಿಯ ಪ್ರತಿ
3) ಟ್ರಾಪ್ ಪೂರ್ವದ ಮಹಜರು
4) ಟ್ರಾಪ್ ನಡವಳಿಗಳು
5) ರಾಸಾಯನಿಕ ತಜ್ಞರ ವರದಿ
6) ವಶಪಡಿಸಿಕೊಂಡ ದಾಖಲೆಗಳ ಪ್ರತಿ
7) ಕೃತ್ಯ ನಡೆದ ಸ್ಥಳಗಳ ನಕ್ಷೆ, ದಾಖಲೆಗಳ ಪ್ರತಿ
8) ಮತ್ತು ಸಾಕ್ಷಿಗಳ ಹೇಳಿಕೆಗಳು

ಆಪಾದಿತರಾದ ಶ್ರೀ ಎಸ್. ರಾಜಯ್ಯ, ಉಪ ನಿರ್ದೇಶಕರು, ಜಿಲ್ಲಾ ಕೈಗಾರಿಕಾ ಕೇಂದ್ರ, ಯಯ್ಯಾಡಿ, ಮಂಗಳೂರು, ಇವರು ಶ್ರೀ ಗಣೇಶ್‌ರಾವ್ ಬಿನ್ ಉಮಾನಾಥ್ ರಾವ್, ಮಾಲೀಕರು, ಮೆಟಲ್ ಕ್ರಾಫ್ಟ್ ಇಂಡಸ್ಟ್ರಿಯಲ್ ಎಸ್ಟೇಟ್, ಯಯ್ಯಾಡಿ, ಮಂಗಳೂರು, ಇವರು ಯಯ್ಯಾಡಿಯಲ್ಲಿ ಕೈಗಾರಿಕಾ ಶೆಡ್ ಹೊಂದಿದ್ದು, ಸದರಿ ಕೈಗಾರಿಕೆಗೆ ಸರ್ಕಾರದಿಂದ ಸಹಾಯಧನವಾಗಿ ರೂ. 48,000/– ಮಂಜೂರಾಗಿದ್ದು, ಸದರಿ ಹಣವನ್ನು ನೀಡಲು ಶ್ರೀ ಎಸ್. ರಾಜಯ್ಯ, ಉಪ ನಿರ್ದೇಶಕರು, ಜಿಲ್ಲಾ ಕೈಗಾರಿಕಾ ಕೇಂದ್ರ, ಯಯ್ಯಾಡಿ, ಮಂಗಳೂರುರವರು ರೂ. 2,000/– (ರೂಪಾಯಿ ಎರಡು ಸಾವಿರ ಮಾತ್ರ)ಗಳನ್ನು ಲಂಚದ ಹಣಕ್ಕೆ ಒತ್ತಾಯಿಸಿದ್ದರಿಂದ ಫಿರ್ಯಾದಿಗೆ ಲಂಚ ಕೊಡಲು ಇಷ್ಟವಿಲ್ಲದ ಕಾರಣ, ಸದರಿ ಅಧಿಕಾರಿಯ ವಿರುದ್ಧ ಕಾನೂನು ಕ್ರಮ ಕೈಗೊಳ್ಳುವ ಬಗ್ಗೆ ದೂರನ್ನು ಸಲ್ಲಿಸಿದ್ದು, ಸದರಿ ದೂರನ್ನು ಆಧರಿಸಿ ಪೊಲೀಸ್ ನಿರೀಕ್ಷಕರು, ಕರ್ನಾಟಕ ಲೋಕಾಯುಕ್ತ, ಪೊಲೀಸ್ ಠಾಣೆ, ಮಂಗಳೂರು ಇವರು ಸದರಿ ಆರೋಪಿತ ಅಧಿಕಾರಿಯ ಮೇಲೆ ಭ್ರಷ್ಟಾಚಾರ ನಿರ್ಮೂಲನಾ ಕಾಯ್ದೆ 1988ರ ಕಲಂ 7, 13(1)(ಡಿ) ಜೊತೆಗೆ ಕಲಂ 13(2)ರ ಪ್ರಕಾರ ಲೋಕಾಯುಕ್ತ, ಠಾಣೆ, ಮೊಕದ್ದಮೆ ನಂ. 5/2007ರ ಪ್ರಕಾರ ಪ್ರಕರಣವನ್ನು ದಾಖಲಿಸಿಕೊಂಡು, ತನಿಖಾಧಿಕಾರಿಯವರು ಬಲೆ ಬೀಸುವ ಮೊದಲಿನ ಎಲ್ಲಾ ಔಚಿತ್ಯ ಪೂರ್ಣ ಕಾರ್ಯಕ್ರಮಗಳನ್ನು ನೆರವೇರಿಸಿದ ನಂತರ, ದಿ: 10–12–2007ರಂದು ಮಂಗಳೂರಿನಲ್ಲಿ ಬೀಸಿದ ಟ್ರಾಪ್ ಯಶಸ್ವಿಯಾಗಿ ಶ್ರೀ ಎಸ್. ರಾಜಯ್ಯ, ಉಪ ನಿರ್ದೇಶಕರು, ಅಕ್ರಮ ಸಂಭಾವನೆಯಾದ ರೂ. 1,000/– (ರೂಪಾಯಿ ಒಂದು ಸಾವಿರ ಮಾತ್ರ) ಗಳನ್ನು ಸ್ವೀಕರಿಸುವಾಗ ಲೋಕಾಯುಕ್ತರ ಧಾಳಿಗೆ ಸಿಕ್ಕಿಕೊಂಡಿರುತ್ತಾರೆ.

ಆಪಾದಿತ ಸರ್ಕಾರಿ ಅಧಿಕಾರಿಯ ಬಲಗೈ ಬೆರಳುಗಳನ್ನು ತೊಳೆಸಿದ ದ್ರಾವಣ ಮತ್ತು ಆರೋಪಿತರು ಲಂಚದ ಹಣವಿಟ್ಟುಕೊಂಡಿದ್ದ ಆರೋಪಿತರು ಕುಳಿತುಕೊಂಡಿದ್ದ ಟೇಬಲ್ಲಿನ ಎಡಗಡೆ ಇಡಲಾಗಿದ್ದ ಕಡತಗಳನ್ನು ಇಡುವ ಪ್ಲಾಸ್ಟಿಕ್ ಟ್ರೇನ ಕೆಳಗಡೆ ಜಾಗವನ್ನು ಹತ್ತಿಯಿಂದ ಒರೆಸಿ ಅದ್ದಿಸಿ ತೊಳೆಸಿದ ದ್ರಾವಣ ಬಣ್ಣ ಬದಲಾಗಿ, ಆರೋಪಿತರು ಲಂಚದ ಹಣವನ್ನು ಸ್ವೀಕರಿಸಿರುವುದು ದೃಢಪಟ್ಟಿರುತ್ತದೆ.

ಲಂಚದ ಹಣವನ್ನು ಆರೋಪಿತರು ಕುಳಿತುಕೊಂಡಿದ್ದ ಟೇಬಲ್ಲಿನ ಎಡಗಡೆ ಇಡಲಾಗಿದ್ದ ಕಡತಗಳನ್ನು ಇಡುವ ಪ್ಲಾಸ್ಟಿಕ್ ಟ್ರೇನ ಕೆಳಗಡೆಯಿಂದ ಯಥಾವತ್ತಾಗಿ ಪಂಚ ಸಾಕ್ಷ್ಯಾಧಾರರುಗಳ ಸಮಕ್ಷಮ ವಶಪಡಿಸಿಕೊಳ್ಳಲಾಗಿದೆ. ಆರೋಪಿತರು ಲಂಚದ ಹಣಕ್ಕೆ ಒತ್ತಾಯಿಸಿ ಸ್ವೀಕರಿಸಿದ ಬಗ್ಗೆ ಫಿರ್ಯಾದುದಾರರು ಮತ್ತು ನೆರಳು ಸಾಕ್ಷಿದಾರರುಗಳು ತಮ್ಮ ಹೇಳಿಕೆಯಲ್ಲಿ ತಿಳಿಸಿರುತ್ತಾರೆ. ಆರೋಪಿತರನ್ನು ತನಿಖೆಯ ಸಲುವಾಗಿ ದಸ್ತಗಿರಿ ಮಾಡಲಾಗಿತ್ತು.

ಆಪಾದಿತ ಸರ್ಕಾರಿ ಅಧಿಕಾರಿಯಾದ ಶ್ರೀ ಎಸ್. ರಾಜಯ್ಯ, ಉಪ ನಿರ್ದೇಶಕರು, ಜಿಲ್ಲಾ ಕೈಗಾರಿಕಾ ಕೇಂದ್ರ, ಯಯ್ಯಾಡಿ, ಮಂಗಳೂರು, ಇವರ ಮೇಲಿನ ಭ್ರಷ್ಟಾಚಾರದ ಆಪಾದನೆ ಮೇಲ್ನೋಟಕ್ಕೆ ಸಾಬೀತಾಗಿರುತ್ತದೆ.

ಈ ಎಲ್ಲಾ ಕಾರಣಗಳಿಂದ ಆಪಾದಿತರು ಲಂಚ ನಿರೋಧ ಕಾಯ್ದೆ 1988ರ ಕಲಂ 7, 13(1)(ಡಿ) ಜೊತೆಗೆ ಕಲಂ 13(2)ರ ಅಡಿಯಲ್ಲಿ ಶಿಕ್ಷಾರ್ಹ ಅಪರಾಧ ಎಸಗಿರುವುದು ಮೇಲ್ನೋಟಕ್ಕೆ ಸಾಬೀತಾಗಿರುವುದರಿಂದ, ಲಂಚ ನಿರೋಧ ಕಾಯ್ದೆ 1988ರ ಕಲಂ 7, 13(1)(ಡಿ) ಜೊತೆಗೆ ಕಲಂ 13(2)ರ ಅಡಿಯಲ್ಲಿ ಅಭಿಯೋಜನೆಗೆ ಒಳಪಡಿಸುವುದು ಅವಶ್ಯವೆಂದು ಸರ್ಕಾರ ಮನಗಂಡಿದೆ.

ಸಕ್ಷಮ ಪ್ರಾಧಿಕಾರವಾದ ಸರ್ಕಾರವು ಆಪಾದಿತರನ್ನು ಕೆಲಸದಿಂದ ತೆಗೆದುಹಾಕಲು ಅಧಿಕಾರವುಳ್ಳದ್ದಾಗಿದೆ. ಆದುದರಿಂದ, ಲಂಚ ನಿರೋಧ ಕಾಯ್ದೆ 1988ರ ಕಲಂ 19(1)ರಡಿ ಆಪಾದಿತ ಸರ್ಕಾರಿ ಅಧಿಕಾರಿಯಾದ ಶ್ರೀ ಎಸ್. ರಾಜಯ್ಯ, ಉಪನಿರ್ದೇಶಕರು, ಜಿಲ್ಲಾ ಕೈಗಾರಿಕಾ ಕೇಂದ್ರ, ಯಯ್ಯಾಡಿ, ಮಂಗಳೂರುರವರನ್ನು 1988ರ ಕಲಂ 7, 13(1)(ಡಿ) ಜೊತೆಗೆ ಕಲಂ 13(2)ರ ಅಡಿಯಲ್ಲಿ ಅಭಿಯೋಜನೆಗೆ ಒಳಪಡಿಸಲು ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ವಾಕೈ 5 ಕೈಸೇವಿ 2008, ಬೆಂಗಳೂರು, ದಿನಾಂಕ: 30ನೇ ಜೂನ್ 2008.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಆಪಾದಿತ ಸರ್ಕಾರಿ ಅಧಿಕಾರಿಯಾದ ಶ್ರೀ ಎಸ್. ರಾಜಯ್ಯ, ಉಪನಿರ್ದೇಶಕರು, ಜಿಲ್ಲಾ ಕೈಗಾರಿಕಾ ಕೇಂದ್ರ, ಯಯ್ಯಾಡಿ, ಮಂಗಳೂರು ರವರನ್ನು ಉಪ ನಿರ್ದೇಶಕರ ಹುದ್ದೆಯಿಂದ ತೆಗೆದುಹಾಕುವ (ವಜಾ ಮಾಡುವ) ಅಧಿಕಾರವುಳ್ಳ ಸಕ್ಷಮ ಪ್ರಾಧಿಕಾರವಾದ ಸರ್ಕಾರವು ಶ್ರೀ ಎಸ್. ರಾಜಯ್ಯ, ಉಪ ನಿರ್ದೇಶಕರು, ಇವರನ್ನು ಲಂಚ ನಿರೋಧ ಕಾಯ್ದೆ 1988ರ ಕಲಂ 7, 13(1)(ಡಿ) ಜೊತೆಗೆ ಕಲಂ 13(2)ರ ಪ್ರಕಾರ ಶಿಕ್ಷಾರ್ಹ ಅಪರಾಧಕ್ಕಾಗಿ ಅಭಿಯೋಜನೆಗೆ ಒಳಪಡಿಸಲು ಭ್ರಷ್ಟಾಚಾರ ನಿರ್ಮೂಲನಾ ಕಾಯ್ದೆ 1988ರ ಕಲಂ 19(1)ರ ಅನ್ವಯ ಸರ್ಕಾರ ಮಂಜೂರಾತಿ ನೀಡಿದೆ.

ಕರ್ನಾಟಕ ಸರ್ಕಾರದ ವ್ಯವಹಾರ ನಿಯಮಾವಳಿ 1977ರ ಅನ್ವಯ ಈ ಮೇಲ್ಕಂಡ ಆದೇಶವನ್ನು ಈ ಕಛೇರಿಯ ಮೊಹರು ಮತ್ತು ನನ್ನ ಸಹಿಯ ಅಡಿಯಲ್ಲಿ ದಿ: 30–6–2008ರಂದು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 989

**ಬಿ.ಸಿ. ಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ,

ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ (ಸೇವೆಗಳು)

**ಒಳಾಡಳಿತ ಸಚಿವಾಲಯ**

**ವಿಷಯ :** ಶ್ರೀ ಎಂ. ನರಸಪ್ಪ, ಸರ್ಕಾರಿ ಅಭಿಯೋಜಕರು, ಹಾಸನ ಇವರ ವಿರುದ್ಧ ಇಲಾಖಾ ವಿಚಾರಣೆಯ ಅಂತಿಮ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ:**

1. ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ಪತ್ರ ಸಂಖ್ಯೆ: ಡಿಪಿಎನ್/ ಆದಾ–93(68)/99–2000 ದಿನಾಂಕ 18–7–2003.
2. ಕಾರಣ ಕೇಳುವ ತಿಳುವಳಿಕೆ ಪತ್ರದ ಸಂಖ್ಯೆ: ಒಇ 592 ಪಿಪಿಇ 2005, ದಿನಾಂಕ 21–11–06.
3. ಆರೋಪಿತ ಅಧಿಕಾರಿಯವರ ಸಮಜಾಯಿಷಿ ಪತ್ರ ದಿನಾಂಕ 8–12–06.
4. ಸರ್ಕಾರಿ ಆದೇಶ ಸಂಖ್ಯೆ: ಒಇ 592 ಪಿಪಿಇ 2005, ದಿನಾಂಕ 22–2–07.
5. ವಿಚಾರಣಾಧಿಕಾರಿಯವರ ವಿಚಾರಣಾ ವರದಿ ದಿನಾಂಕ 10–8–2007.
6. 2ನೇ ಕಾರಣ ಕೇಳುವ ತಿಳುವಳಿಕೆ ಪತ್ರ ಸಂಖ್ಯೆ: ಒಇ 592 ಪಿಪಿಇ 2005, ದಿನಾಂಕ 23–8–2007.
7. ಆರೋಪಿತ ಅಧಿಕಾರಿಯ ಸಮಜಾಯಿಷಿ ಪತ್ರ ದಿನಾಂಕ 22–9–2007.

**ಪ್ರಸ್ತಾವನೆ :**

ಶ್ರೀ ಎಂ. ನರಸಪ್ಪ, ಸರ್ಕಾರಿ ಅಭಿಯೋಜಕರು, ಹಾಸನ ಇವರು ಮಡಿಕೇರಿಯ ಜಿಲ್ಲಾ ಮತ್ತು ಸತ್ರ ನ್ಯಾಯಾಲಯದಲ್ಲಿ ಸರ್ಕಾರಿ ಅಭಿಯೋಜಕರಾಗಿ ಕಾರ್ಯನಿರ್ವಹಿಸುತ್ತಿದ್ದಾಗ ಸಲ್ಲಿಸಿರುವ 1991ನೇ ಸಾಲಿನ ಆಸ್ತಿ ದಾಯಿತ್ವಗಳ ಪಟ್ಟಿಯಲ್ಲಿ ಮೊದಲ ಬಾರಿಗೆ ಬಳ್ಳಾರಿ ಕೌಲ್ ಬಜಾರ್ ಮನೆ ನಂ. 2ನ್ನು ತಾಯಿಯ ಮನೆಯಿಂದ ಅವರ ಹೆಂಡತಿಗೆ ಉಡುಗೊರೆಯಾಗಿ ಬಂದಿರುವುದನ್ನು ನಮೂದಿಸಿದ್ದು ಸದರಿ ಸ್ವತ್ತನ್ನು ಪತ್ನಿಯ ಹೆಸರಿನಲ್ಲಿ ಸ್ವೀಕರಿಸಿದ ಬಗ್ಗೆ ದಾಖಲಾತಿಗಳನ್ನು ಸಲ್ಲಿಸಲು ವಿಫಲರಾಗಿ ಬೇಜವಾಬ್ದಾರಿಯಿಂದ ಕರ್ತವ್ಯ ನಿರ್ಲಕ್ಷ ತೋರಿಸಿದ ಸಂಬಂಧ ಕರ್ನಾಟಕ ಸರ್ಕಾರ ಸೇವಾ (ನಡತೆ) ನಿಯಮ 1966ರ ನಿಯಮ 3(1)ರ ಉಪ ನಿಯಮ (i)ನ್ನು ಸ್ಪಷ್ಟವಾಗಿ ಉಲ್ಲಂಘಿಸಿದ ಆರೋಪದ ಬಗ್ಗೆ ಮೇಲೆ (1)ರಲ್ಲಿ ಓದಲಾಗಿರುವ ಪತ್ರದಲ್ಲಿ ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ, ಬೆಂಗಳೂರು ಇವರು ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಮೇಲೆ (2)ರಲ್ಲಿ ಓದಲಾಗಿರುವ ಕಾರಣ ಕೇಳುವ ತಿಳುವಳಿಕೆ ಪತ್ರದಲ್ಲಿ ಶ್ರೀ ಎಂ. ನರಸಪ್ಪ, ಸರ್ಕಾರಿ ಅಭಿಯೋಜಕರು ಇವರಿಗೆ ಕಾರಣ ಕೇಳುವ ತಿಳುವಳಿಕೆ ಪತ್ರದೊಂದಿಗೆ ದೋಷಾರೋಪಣ ಪಟ್ಟಿ ಅನುಬಂಧ–1 ರಿಂದ 4ರ ವರೆಗೆ ಜಾರಿ ಮಾಡಿ ತಮ್ಮ ಮೇಲಿನ ಆಪಾದನೆಗಳನ್ನು ಒಪ್ಪಿಕೊಳ್ಳುವ ಅಥವಾ ನಿರಾಕರಿಸುವ ಬಗ್ಗೆ ಲಿಖಿತ ಹೇಳಿಕೆಯನ್ನು ಸಲ್ಲಿಸುವಂತೆ ತಿಳಿಸಲಾಗಿದ್ದಿತು.

ಮೇಲೆ (3)ರಲ್ಲಿ ಓದಲಾಗಿರುವ ಪತ್ರದಲ್ಲಿ ಆರೋಪಿತ ಅಧಿಕಾರಿಯು ತಮ್ಮ ಮೇಲಿನ ಆರೋಪಗಳನ್ನು ನಿರಾಕರಿಸಿ ಲಿಖಿತ ಹೇಳಿಕೆಯನ್ನು ಸಲ್ಲಿಸಿರುತ್ತಾರೆ. ಆರೋಪಗಳ ಸತ್ಯಾಸತ್ಯತೆಯನ್ನು ಕಂಡುಕೊಳ್ಳುವ ಸಲುವಾಗಿ ಮೇಲೆ (4)ರಲ್ಲಿ ಓದಲಾಗಿರುವ 22–2–07ರಲ್ಲಿ ಇಲಾಖಾ ವಿಚಾರಣಾಧಿಕಾರಿಯನ್ನು ನೇಮಿಸಿ ಆದೇಶ ಹೊರಡಿಸಲಾಗಿದೆ.

ಮೇಲೆ (5)ರಲ್ಲಿ ಓದಲಾಗಿರುವ 10–8–2007ರಲ್ಲಿ ವಿಚಾರಣಾಧಿಕಾರಿಯವರು ಶ್ರೀ ಎಂ. ನರಸಪ್ಪ, ಸರ್ಕಾರಿ ಅಭಿಯೋಜಕರು ಇವರ ಮೇಲಿನ ಆರೋಪ ಸಕಾರಾತ್ಮಕವೆಂದು ನಿಷ್ಕರ್ಷೆ ನೀಡಿರುತ್ತಾರೆ.

ಮೇಲೆ (6)ರಲ್ಲಿ ಓದಲಾಗಿರುವ 23–8–2007ರ 2ನೇ ಕಾರಣ ಕೇಳುವ ತಿಳುವಳಿಕೆ ಪತ್ರದೊಂದಿಗೆ ಇಲಾಖಾ ವಿಚಾರಣಾ ವರದಿಯ ಪ್ರತಿಯನ್ನು ಆರೋಪಿತ ಸರ್ಕಾರಿ ಅಧಿಕಾರಿಗೆ ಒದಗಿಸಿ ಅವರ ಹೇಳಿಕೆಯನ್ನು ನೀಡಲು 30 ದಿನಗಳ ಕಾಲಾವಕಾಶವನ್ನು ನೀಡಲಾಗಿತ್ತು. ಆರೋಪಿತ ಸರ್ಕಾರಿ ಅಧಿಕಾರಿಯು ತಮ್ಮ ಲಿಖಿತ ಹೇಳಿಕೆಯನ್ನು ಸಲ್ಲಿಸಿ ತಮ್ಮ ಮೇಲಿನ ಯಾವುದೇ ಶಿಕ್ಷೆಯನ್ನು ವಿಧಿಸದೇ ಸೂಕ್ತ ಎಚ್ಚರಿಕೆಯನ್ನು ನೀಡಿ ಪ್ರಕರಣವನ್ನು ಮುಕ್ತಾಯಗೊಳಿಸಬೇಕೆಂದು ಮೇಲೆ (7)ರಲ್ಲಿ ಓದಲಾಗಿರುವ ದಿನಾಂಕ 22–9–2007ರ ಪತ್ರದಲ್ಲಿ ಕೋರಿರುತ್ತಾರೆ. ಆರೋಪಿತ ಸರ್ಕಾರಿ ಅಧಿಕಾರಿಯು ನೀಡಿರುವ ಹೇಳಿಕೆಯು ಸಮಂಜಸವಾಗಿರುವುದಿಲ್ಲವಾದ್ದರಿಂದ ಸದರಿ ಆರೋಪಿತ ಸರ್ಕಾರಿ ಅಧಿಕಾರಿಯ ಮೇಲೆ ಕರ್ನಾಟಕ ಸರ್ಕಾರ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 8(ii)ರ ಅನುಸಾರ ನಿಂದನೆ (ವಾಗ್ದಂಡನೆಯನ್ನು) ವಿಧಿಸುವ ಬಗ್ಗೆ ನೇಮಕಾತಿ ಪ್ರಾಧಿಕಾರಿ ಮತ್ತು ಶಿಸ್ತಿನ ಪ್ರಾಧಿಕಾರಿಯು ನಿರ್ಣಯಿಸಿರುತ್ತಾರೆ.

ವಿಷಯವನ್ನು ಕೂಲಂಕಷವಾಗಿ ಪರಿಶೀಲಿಸಿ ಸರ್ಕಾರವು ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಒಇ 592 ಪಿಪಿಇ 2005, ಬೆಂಗಳೂರು, ದಿನಾಂಕ: 26ನೇ ಜೂನ್ 2008.**

ಶ್ರೀ ಎಂ. ನರಸಪ್ಪ, ಸರ್ಕಾರಿ ಅಭಿಯೋಜಕರು, ಹಾಸನ ಇವರ ವಿರುದ್ಧ ಪ್ರಸ್ತಾವನೆಯಲ್ಲಿ ಮಾಡಲಾಗಿರುವ ಆಪಾದನೆಯು ಇಲಾಖಾ ವಿಚಾರಣೆಯಲ್ಲಿ ಸಾಕ್ಷಾಧಾರಗಳಿಂದ ಸಾಬೀತಾಗಿರುವುದರಿಂದ ಇವರ ವಿರುದ್ಧ ಕರ್ನಾಟಕ ಸರ್ಕಾರಿ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957 ನಿಯಮ 8(ii)ರನ್ವಯ ವಾಗ್ದಂಡನೆಯನ್ನು ವಿಧಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 992

**ಕೆ.ಸಿ. ಸಿದ್ದಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ

(ಕಾ ಮತ್ತು ಸು ಕಾಫೀಪೋಸ ಮತ್ತು ಅಭಿಯೋಗ)

## ಶಿಕ್ಷಣ ಸಚಿವಾಲಯ

**ವಿಷಯ :** ತಾಂತ್ರಿಕ ಪರೀಕ್ಷಾ ಮಂಡಳಿಯ ಡಿಪ್ಲೊಮಾ ಪರೀಕ್ಷೆಗಳಲ್ಲಿ ಕರ್ತವ್ಯಲೋಪ ಎಸಗುವ ಮತ್ತು ಮಾಲ್ ಪ್ರಾಕ್ಟೀಸ್‌ನಲ್ಲಿ ತೊಡಗುವ ಅಧಿಕಾರಿಗಳು/ ಉಪನ್ಯಾಸಕರು/ ಸಿಬ್ಬಂದಿ ವರ್ಗ ಇವರುಗಳಿಗೆ ಶಿಕ್ಷೆ ವಿಧಿಸುವುದು ಮತ್ತು ದಂಡ ವಿಧಿಸುವ ಕುರಿತು ಆದೇಶ.

**ಓದಲಾಗಿದೆ:** ನಿರ್ದೇಶಕರು, ತಾಂತ್ರಿಕ ಶಿಕ್ಷಣ ಇಲಾಖೆ ಇವರ ಪತ್ರ ಸಂಖ್ಯೆ: ಬಿಟಿಇ 02 ಇಸಿಎಸ್ (1) 2007/5850, ದಿನಾಂಕ 14/18–1–2008.

**ಪ್ರಸ್ತಾವನೆ :**

ತಾಂತ್ರಿಕ ಪರೀಕ್ಷಾ ಮಂಡಳಿಯ ಡೊಪ್ಲೊಮಾ ಪರೀಕ್ಷೆಗಳಿಗೆ ಕರ್ತವ್ಯ ಲೋಪ ಎಸಗುವ ಮತ್ತು ಮಾಲ್ ಪ್ರಾಕ್ಟೀಸ್ ಪ್ರಕರಣದಲ್ಲಿ ತೊಡಗುವ ಅಧಿಕಾರಿಗಳು/ ಉಪನ್ಯಾಸಕರು/ ಸಿಬ್ಬಂದಿ ವರ್ಗದವರ ಮೇಲೆ ಸೂಕ್ತ ಶಿಸ್ತು ಕ್ರಮ ಜರುಗಿಸುವ ಮತ್ತು ದಂಡ ವಿಧಿಸುವ ಬಗ್ಗೆ ಸರ್ಕಾರದ ಆದೇಶ ಸಂಖ್ಯೆ: ಇಡಿ 90 ಟಿಜಿಎಲ್ 94, ದಿನಾಂಕ 12–11–94ರಲ್ಲಿ ಆದೇಶಿಸಲಾಗಿರುತ್ತದೆ. 2003–04ರ ಶೈಕ್ಷಣಿಕ ವರ್ಷದಿಂದ ಡಿಪ್ಲೊಮಾ ಪರೀಕ್ಷೆಗಳಲ್ಲಿ ಸೆಮಿಸ್ಟರ್ ಪದ್ಧತಿ ಅಳವಡಿಸಲಾಗಿದ್ದು, ಪರೀಕ್ಷಾ ಪದ್ಧತಿಯಲ್ಲಿ ಸಾಕಷ್ಟು ಬದಲಾವಣೆ ಆಗಿರುತ್ತದೆ. ಆದ್ದರಿಂದ ಪರೀಕ್ಷೆಗಳಲ್ಲಿ ಕರ್ತವ್ಯ ಲೋಪ ಎಸಗುವ ಮತ್ತು ಮಾಲ್ ಪ್ರಾಕ್ಟೀಸ್‌ನಲ್ಲಿ ತೊಡಗುವ ಅಧಿಕಾರಿಗಳು/ ಉಪನ್ಯಾಸಕರು/ ಸಿಬ್ಬಂದಿ ವರ್ಗದವರ ವಿರುದ್ಧ ಜರುಗಿಸುವ ಶಿಸ್ತು ಕ್ರಮಗಳಲ್ಲಿ ಸಾಕಷ್ಟು ಮಾರ್ಪಾಡು ಆಗಬೇಕಾಗಿರುವುದರಿಂದ ಈ ಬಗ್ಗೆ ಸೂಕ್ತ ಸರ್ಕಾರಿ ಆದೇಶವನ್ನು ಹೊರಡಿಸುವಂತೆ ಮೇಲೆ ಓದಲಾದ ಪತ್ರದಲ್ಲಿ ನಿರ್ದೇಶಕರು, ತಾಂತ್ರಿಕ ಶಿಕ್ಷಣ ಇಲಾಖೆರವರು ಸರ್ಕಾರವನ್ನು ಕೋರಿರುತ್ತಾರೆ. ಸದರಿ ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಶವಾಗಿ ಪರಿಶೀಲಿಸಿದೆ.

ಆದ್ದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಇಡಿ 98 ಟಿಪಿಇ 2008 ಬೆಂಗಳೂರು, ದಿನಾಂಕ: 23ನೇ ಜೂನ್ 2008.**

ತಾಂತ್ರಿಕ ಶಿಕ್ಷಣ ನಿರ್ದೇಶಕರ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿದ ಸರ್ಕಾರವು ತಾಂತ್ರಿಕ ಪರೀಕ್ಷಾ ಮಂಡಳಿಯ ಡಿಪ್ಲೊಮಾ ಪರೀಕ್ಷೆಗಳಲ್ಲಿ ಕರ್ತವ್ಯ ಲೋಪ ಎಸಗುವ ಮತ್ತು ಮಾಲ್ ಪ್ರಾಕ್ಟೀಸ್‌ನಲ್ಲಿ ತೊಡಗುವ ಅಧಿಕಾರಿಗಳು/ ಉಪನ್ಯಾಸಕರು/ ಸಿಬ್ಬಂದಿ ವರ್ಗದವರು ವಿರುದ್ಧ ಶಿಸ್ತು ಕ್ರಮ ಮತ್ತು ದಂಡ ವಿಧಿಸುವ ಕುರಿತು ಹೊರಡಿಸಲಾಗಿರುವ ಸರ್ಕಾರದ ಆದೇಶ ಸಂಖ್ಯೆ: ಇಡಿ 90 ಟಿಜಿಎಲ್ 94, ದಿನಾಂಕ 12–11–94ನ್ನು ಭಾಗಶಃ ಮಾರ್ಪಡಿಸಿ ಈ ಕೆಳಕಂಡಂತೆ ಆದೇಶಿಸಲಾಗಿದೆ.

**1. Major Mistakes:**

| Sl. No. | Nature of Mistakes | Penalty |
|---|---|---|
| 1 | Chief Supdts/ Deputy Chief Supdts/ Chief Observer/ Custodian | |
| | i) Failure to prevent mass copying by the Chief Supdt./ Dy. Chief Supdt/ Custodian/ Invigilator in the examination hall reported by squad Officer or any other official authorized to inspect the exam. Centre or reported by the examiners at the time of valuation | 1) Penalty of Rs. 5,000/- to be levied<br>2) Departmental action to be initiated against staff of Govt. and aided polytechnics.<br>In respect of private polytechnics staff, management to be informed to initiate appropriate action commensurate with the gravity of offence. |
| | ii) Failure to report as Chief/Supdt./Dy. Chief Supdt/ Chief Observer | Penalty of Rs. 1,000/- to be levied as well as initiating Departmental action as per rules |
| | iii) Opening of Wrong question paper packet by Chief Supdt Dy. Chief Supdt/ Chief Observer | Departmental action to be initiated. In additioon<br>1. Entire cost of reprinting of Question paper, transportation of Q.P. and other related expenditure are to bef recovered from the concerned staff. |
| | iv) Issue of admission tickets to candidates whose admissions are not approved by DTE/ who have shortage of attendance beyond condonable limit and candidates who have been debarred from appearing for the exam | Penalty of Rs. 5,000/- for each candidate. If it is repeated disciplinary action as per rules to be initiated. |
| | v) Failure to report detected or reported malpractice cases by the Chief Supdt. | Impose a penalty of Rs. 5,000/- If repeated Disciplinary action as per rules. |
| | vi) Failure to send intimation regarding the practical exams to the examiners appointed by the Board by Reg. Post/CDP 10 days in advance | Penalty of Rs. 2,000/- for each case and if repeated departmental enquiry. |
| | vii) Failure to make alternative arrangement for practical exams as per the norms prescribed by the Board | Penalty of Rs. 5,000/- and repeated departmental enquiry. |
| 2 | **Examiners:**<br>i) Mistakes in totaling in the answer books upto 3 Nos. | Penalty of Rs. 1,000/- and No. TA/DA |
| | ii) Mistakes in totalling in the answer books more than 3 Nos | Penalty of Rs. 1,000/- No TA/DA and departmental enquiry. |
| | iii) Failure to award marks to questions or part of questions upto three Nos | Penalty of Rs. 1,000/- per mistake |

| Sl. No. | Nature of Mistakes | Penalty |
|---|---|---|
| | iv) Failure to award marks to questions or part of questions more than three Nos | Penalty of Rs. 1,000/- No TA/DA and DEQ |
| | v) Mistakes in transfer of marks from answer scripts to marks list | Penalty of Rs. 1,000/- No TA/DA and DEQ |
| | vi) Inserting answer books in the packet bundle without valuation | Penalty of Rs. 2,000/- for each case + DEQ |
| | vii) Failure to set theory question papers, value theory answer scripts and failure to set and conduct practical exams without valid reasons | Fine of Rs. 5,000/- and Institution to be informed to with hold salary until further instruction from Secretary/ DTE+ departmenatal enquiry. |
| | viii) Irregularities found in the setting of question papers | Fine of Rs. 5,000/- + departmental enquiry. |
| | ix) Irregularities found in the scrutiny of question papers | Fine of Rs. 5,000/- + departmental enquiry. |
| 3 | **Invigilators**<br>Involvement in helping copying/replacement of answer papers etc. tampering with answer paper etc | Penalty of Rs. 5,000/- + departmental enquiry. |
| II | **Minor Mistakes**<br>1) Chief Supdt/Dy. Chief Supdt/ Custodian/ Chief observer | |
| | I) Failure to send corrected candidate list, Practical marks list, I.A. Marks, Master attendance, requisition for question papers and any other information concerned with the exam | Penalty of Rs. 1,000/- upto 10 days Rs. 2,000/- upto 20 days and more than 20 days, Fine + DEQ |
| | II) Failure to mention the correct code No. and subject in the content slip pinned to the coverf containing answer papers | Penalty of Rs. 1,000/- |
| | III) Failure to mark candidates absent, Malpractice cases, present for Group 'B' only total number of paper etc. in the content slip | Penalty of Rs. 1,000/- |
| | IV) Failure to note the details / absentees, Malpractice cases, in the Computer Marks list | Penalty of Rs. 1,000/- |
| | V) Writing Institute C.N. name and other information of the cover containing answer papers, which leads to identification of the institution | Penalty of Rs. 1,000/- |
| | VI) Failure to detect on the part of the Chief Supdt/ Dy. Chief Supdt/ Custodiean/ Invigilator/ Office Supdt. The tampering or changing the Reg. Nos. at the end of exam/ at the time of inserting the answer books into the answer book covers | Penalty of Rs. 2,000/- + DEQ |

| Sl. No. | Nature of Mistakes | Penalty |
|---|---|---|
| | VII) Failure to issue/ send non computer printed marks sheet with all the details like class, course, subject with subject code and the institution code on the top right corner | Penalty of Rs. 500/- for marks sheet |
| | VIII) Failure on the part of the Chief Supdt / Chief Observer/ Dy. Chief Supdt to send statements and reports as desired by the Board after completion of Exam in the Centre | Penalty of Rs. 2,000/- if repeated DEQ |
| 2 | **Examiners:**<br>i) Failure to record marks of each question on the facing sheet of the answer script or against each answer inside the answer script or failure to round off the extra marks | Penalty of Rs. 1,000/- per mistake |
| | ii) Failure to affix signature on the facing sheet of the answer book/ on the marks list or failure to affix the examiner code Nos in the marks list | Penalty of Rs. 1,000/- per mistake |
| | iii) Inserting marks list/in the answer book packet/ bundle without handling over to the camp officer | Penalty of Rs. 2,000/- per mistake. |
| | iv) Failure to write marks in words or figures or attest in the marks list or discrepancy in the marks list and figures and words | Penalty of Rs. 500 per mistake |
| | v) Failure to fill up the details in a non computer printed marks sheet, like class, course subject and subject code or writing incomplete register Nos. | Penalty of Rs. 500 per mistake |
| 3) | **Invigilators**<br>i) Late coming to the invigilation work | First time warning, if repeated issue memo and send a copy to Secretary, Board of Technical Education. Further, if the mistake is still repeated DEQ |
| | ii) Absenting from the invigilation work without obtaining prior permission | First time warning, if repeated issue memo and send a copy to Sec. BTE. Further, if the mistake is still repeated DEQ. |
| | iii) Wrong entries in the attendance reports | Penalty of Rs. 250/- per each entry |
| | iv) Failure to obtain signature of the candidate in the invigilators diary at time of issuing answer books | Penalty of Rs. 250/- per each entry and he/she has to face the consequences that may arise in future in the matter |
| | v) Failure to give correct answer book account/ response sheet account/ question paper acct., at the time of returning the answer books or to the squad officers/ officers who are authorized to check during the conduct of exams | Fine of Rs. 250/- |
| | vi) Failure to initial in the answer paper/R.S. | Fine of Rs. 250/- |

| Sl. No. | Nature of Mistakes | Penalty |
|---|---|---|
| 4 | **Ministrial Staff**<br>Asst. Ad.O/ Registrar./ Office Supdt./ Case Worker | |
| | i) Failure to put correct answer scripts according to Reg. Nos. in the marks list into the answer book covers by the Chief Supdt/ Dy. Chief Supdt/ Custodian/ Rs. Supdt. | Rs. 3,000/- penalty to be imposed on all staff involved + DEQ |
| | ii) Failure to send corrected candidate list, practical marks list, I.A. marks, master attendance, requisition for question papers and any other information concerned with the exam | Rs. 1,000/- penalty upto 10 days Rs. 2,000/- penalty upto 20 days More than 20 days fine + DEQ, penalty to be collected collectively |
| | iii) Failure to mention the correct code no. and subject in the content slip pinned to the cover containing answer papers | Penalty of Rs. 1,000/- to be collected collectively |
| | iv) Failure to detect the tampering or changing of the Reg. Nos. at the end of exam. At the time of inserting the answer books, into the answer book covers | No remuneration will be paid for that exam and if repeated DEQ |
| | v) Failure to send intimation regarding the practical exams to the examiners appointed by the Board by CPO/ Reg. Post 10 days in advance. | A fine of Rs. 1,000/- each examiner will be imposed |
| | vi) Failure to issue/send non computer printed marks sheet with all the details like class, course, subject with subject code and the institution code on the top right corner | A fine of Rs. 1,000/- per marks list to be imposed collectively. |

1. Fine collected for all the above cases at institution level should be remitted to Secretary, Board of Technical Examination, Bangalore.
2. Order is to be implemented strictly at the institution level.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 993

**ಎನ್.ಆರ್. ಪ್ರಭು**

ಸರ್ಕಾರದ ಅಧೀನ ಕಾರ್ಯದರ್ಶಿ,

ಶಿಕ್ಷಣ ಇಲಾಖೆ (ಕಾಲೇಜು ಮತ್ತು ತಾಂತ್ರಿಕ)

## ENERGY SECRETARIAT

**Sub :** Change of company's name from M/s SNC Power Corporation Private Limtiedf to M/s Kumaradhara Power Private Limited-reg.

**Read :** 1. Government Order No. EN 194 NCE 2006 dated 26-5-2006.

2. Letter No. KRED/06/Kollya/2008/ 956 dated: 18-6-2008 received from the Managing Director, Karnataka Renewable Energy Development Limited, Bangalore.

**Preamble:**

In the Government Order read at (1) above sanction has been accorded for the implementation of 18.00 MW Mini Hydel power project in favour of M/s SNC Power Private Limited across Kumaradhar river tributory of Nethravati river Kollya/ Parangaje village, Puttur taluk, Dakshna Kannada District.

In the letter read at (2) above the Managing Director, Karnataka Renewable Energy Development Limited, Bangalore, vide his letter read at (2) above has recommended to the Government for Change of

Company's name from M/s SNC Power Corporation Private Limited to M/s Kumaradhara Power Private Limited. The Deputy Registrar of Companies, Karnataka has issued a certificate in this regard.

The proposal has been examined at the Government level and hence the order:

**Government Order No. EN 184 NCE 2008, Bangalore, Dated 1st July 2008**

Government accords approval for the Change of Company's name from M/s. SNC Power Corporation Private Limited to M/s Kumaradhara Power Private Limited. Hence all the allotments, documents and approvals pertaining to mini Hydel Power Project allotted in the name of M/s SNC Power Corporation Private Limited stands in the name of M/s Kumaradhara Power Private Limited.

By order and in the name of the Governor of Karnataka,

PR. 987

**SURESH B. KRISHNAPPANAVAR**

Under Secretary to Government,

Energy Department.

**ಕಂದಾಯ ಸಚಿವಾಲಯ**

**ಆರ್‌ಡಿ 14 ಎಡಿಇ 2008, ಬೆಂಗಳೂರು, ದಿನಾಂಕ: 5ನೇ ಜುಲೈ 2008.**

**ತಿದ್ದುಪಡಿ ಆದೇಶ**

ಸರ್ಕಾರದ ಆದೇಶ ಸಂ. ಆರ್‌ಡಿ 14 ಎಡಿಇ 2008, ದಿನಾಂಕ 30–6–2008ರಲ್ಲಿನ ಕಡೆಯ ಪ್ಯಾರದಲ್ಲಿನ ಎರಡನೇ ಸಾಲಿನಲ್ಲಿ "ವಿಚಾರಣಾ ವರದಿಯನ್ನು ಆರು ತಿಂಗಳೊಳಗಾಗಿ" ಎಂಬುದರ ಬದಲಿಗೆ "ವಿಚಾರಣಾ ವರದಿಯನ್ನು ಎರಡು ತಿಂಗಳೊಳಗಾಗಿ" ಎಂದು ತಿದ್ದಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1032

**ಬಿ.ವಿ. ಚೌಕಿಮಠ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಸೇವೆಗಳು–3)

**ವಿಷಯ :** 2008–09ನೇ ಸಾಲಿನಲ್ಲಿ ಸುರಿದ ಭಾರಿ ಮಳೆಯಿಂದ ಆಗಿರುವ ಹಾನಿಗೆ ಪರಿಹಾರ ನೀಡಲು ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಪ್ರಸ್ತಾವನೆ :**

2008–09ನೇ ಸಾಲಿನಲ್ಲಿ ಮುಂಗಾರು ಪ್ರಾರಂಭವಾಗುವ ಹಂತದಲ್ಲಿದ್ದು ಪ್ರಕೃತಿ ವಿಕೋಪದಿಂದ ಉಂಟಾದ ಹಾನಿಗೆ ತುರ್ತು ಪರಿಹಾರ ಕ್ರಮಕೈಗೊಳ್ಳಲು ಜಿಲ್ಲಾಧಿಕಾರಿಗಳ ಬಳಿ ಅನುದಾನ ಕಡಿಮೆ ಇರುವುದರಿಂದ ಪರಿಹಾರ ಕಾರ್ಯಕ್ಕೆ ಅನುದಾನ ಬಿಡುಗಡೆ ಮಾಡಲು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 145 ಟಿಎನ್‌ಆರ್ 2008, ಬೆಂಗಳೂರು, ದಿನಾಂಕ: 4ನೇ ಜೂನ್ 2008.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಪ್ರಕೃತಿ ವಿಕೋಪದಿಂದ ಉಂಟಾಗುವ ಹಾನಿಗಳಿಗೆ ತುರ್ತು ಪರಿಹಾರ ಕೈಗೊಳ್ಳಲು ಪ್ರಕೃತಿ ವಿಕೋಪ ಪರಿಹಾರ ನಿಧಿಯಿಂದ ದಕ್ಷಿಣ ಕನ್ನಡ ಜಿಲ್ಲೆಯ ಜಿಲ್ಲಾಧಿಕಾರಿಯವರಿಗೆ ರೂ. 2.00 ಕೋಟಿ (ರೂ.ಗಳು ಎರಡು ಕೋಟಿ ಮಾತ್ರ)ಗಳ ಅನುದಾನ ಬಿಡುಗಡೆ ಮಾಡಲು ಮಂಜೂರಾತಿ ನೀಡಲಾಗಿದೆ.

ಮೇಲಿನಂತೆ ಬಿಡುಗಡೆ ಮಾಡಿರುವ ಅನುದಾನವನ್ನು ಪ್ರಕೃತಿ ವಿಕೋಪ ಪರಿಹಾರ ನಿಯಮನುಸಾರ ಕೆಳಕಂಡಂತೆ ಆದ್ಯತೆ ಮೇಲೆ ಉಪಯೋಗಿಸತಕ್ಕದ್ದು:

1) ಮಾನವ ಜೀವಹಾನಿ
2) ಜಾನುವಾರು ಜೀವಹಾನಿ
3) ಕುಡಿಯುವ ನೀರು
4) ಮೂಲಭೂತ ಸೌಕರ್ಯಗಳ ತುರ್ತು ದುರಸ್ತಿ

ಮೇಲಿನಂತೆ ಬಿಡುಗಡೆ ಮಾಡಿರುವ ಅನುದಾನವನ್ನು ದಕ್ಷಿಣ ಕನ್ನಡ ಜಿಲ್ಲೆಯ ಜಿಲ್ಲಾಧಿಕಾರಿಗಳು, ಪೇಯೀಸ್ ರಶೀದಿ ಬಿಲ್ಲುಗಳನ್ನು ತಯಾರಿಸಿ ಮೇಲು ರುಜು ಮಾಡಿ ಜಿಲ್ಲಾ ಖಜಾನೆಯಿಂದ ಡ್ರಾ ಮಾಡಿ ಪಿ.ಡಿ. ಖಾತೆಗೆ ಜಮಾ ಮಾಡಿದ ನಂತರ ಪರಿಹಾರ ಕಾರ್ಯಗಳಿಗೆ ಉಪಯೋಗಿಸತಕ್ಕದ್ದು.

ಮೇಲಿನಂತೆ ಬಿಡುಗಡೆ ಮಾಡಿರುವ ಅನುದಾನವನ್ನು 2007–08ನೇ ಸಾಲಿನ ಆಯವ್ಯಯ ಲೆಕ್ಕಶೀರ್ಷಿಕೆ 2245–02–110–0–01–100 (ಯೋಜನೇತರ) ಅಡಿಯಲ್ಲಿ ಭರಿಸತಕ್ಕದ್ದು.

ಅನುದಾನ ವೆಚ್ಚ ಮಾಡುವಾಗ ಸರ್ಕಾರವು ಕಾಲಕಾಲಕ್ಕೆ ಹೊರಡಿಸಿರುವ ಮಾರ್ಗಸೂಚಿ/ಆದೇಶ/ಸುತ್ತೋಲೆಗಳನ್ನು ಪಾಲಿಸುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಎಫ್‌ಡಿ 467 ವೆಚ್ಚ–7/08, ದಿನಾಂಕ 12–5–2008ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಭಾರತ ಸರ್ಕಾರದ ರಾಷ್ಟ್ರಪತಿಗಳ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 926

**ಆರ್. ಲೀಲಾವತಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ವಿಪತ್ತು ನಿರ್ವಹಣೆ)

**ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ**

**ವಿಷಯ :** ಕರ್ನಾಟಕ ಆಡಳಿತ ಸೇವಾ ಅಧಿಕಾರಿಗಳ ಕುಂದು ಕೊರತೆಗಳ ಬಗ್ಗೆ ಅಧ್ಯಯನ – ಸಲಹಾ ಸಮಿತಿಯ ಶಿಫಾರಸ್ಸುಗಳನ್ನು ಅನುಷ್ಠಾನಗೊಳಿಸುವ ಬಗ್ಗೆ – ಆದೇಶ.

**ಓದಲಾಗಿದೆ:** 1. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 11 ಆಸೇಇ 2006 ದಿನಾಂಕ 20–2–2007.

2. ಕರ್ನಾಟಕ ಆಡಳಿತ ಸೇವಾ ಅಧಿಕಾರಿಗಳ ಸಂಘದ ದಿನಾಂಕ 10–8–2007ರ ಮನವಿ.

**ಪ್ರಸ್ತಾವನೆ :**

ಮೇಲಿನ ಕ್ರಮ ಸಂಖ್ಯೆ 1ರಲ್ಲಿ ಓದಲಾದ ದಿನಾಂಕ 20–2–2007ರ ಆದೇಶದಲ್ಲಿ ಕರ್ನಾಟಕ ಆಡಳಿತ ಸೇವಾ ಅಧಿಕಾರಿಗಳ ಸೇವಾ ವಿಷಯದಲ್ಲಿನ ಕುಂದು ಕೊರತೆಗಳ ಬಗ್ಗೆ ಅಧ್ಯಯನ ನಡೆಸಿ ಸೂಕ್ತ ಶಿಫಾರಸ್ಸನ್ನು ಮಾಡಲು ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿ ಸಲಹಾ ಸಮಿತಿಯನ್ನು ರಚಿಸಲಾಗಿದೆ.

ಕರ್ನಾಟಕ ಆಡಳಿತ ಸೇವಾ ಅಧಿಕಾರಿಗಳ ಸಂಘವು ದಿನಾಂಕ 10–8–2007ರಂದು ಮನವಿ ಸಲ್ಲಿಸಿ, ಕೆ.ಎ.ಎಸ್. ಸೂಪರ್ ಟೈಂ ಸ್ಕೇಲ್ ವೃಂದಕ್ಕೆ ಬಡ್ತಿ ಹೊಂದಲು ಕೆ.ಎ.ಎಸ್. ಕಿರಿಯ ಶ್ರೇಣಿ ವೃಂದದಿಂದ ಒಟ್ಟು 20 ವರ್ಷಗಳ ಸೇವೆಯನ್ನು ಪೂರೈಸಿರಬೇಕೆಂಬ ನಿಯಮವಿದ್ದು, ಈಗ ಸೂಪರ್ ಟೈಂ ಸ್ಕೇಲ್ ವೃಂದದಲ್ಲಿ ಖಾಲಿ ಹುದ್ದೆಗಳಿದ್ದು, 20 ವರ್ಷಗಳ ಕನಿಷ್ಠ ಸೇವೆಯನ್ನು ಪೂರೈಸಿರುವ ಅಧಿಕಾರಿಗಳು ಲಭ್ಯವಿಲ್ಲದೆ ಬಡ್ತಿ ನೀಡಲು ಸಾಧ್ಯವಾಗುತ್ತಿಲ್ಲವಾದ್ದರಿಂದ, ಸೂಪರ್ ಟೈಂ ಸ್ಕೇಲ್ ವೃಂದಕ್ಕೆ ನಿಗಧಿಪಡಿಸಿರುವ ಕನಿಷ್ಠ 20 ವರ್ಷಗಳ ಸೇವೆಯನ್ನು 16 ವರ್ಷಗಳಿಗೆ ಇಳಿಸಲು ಕೋರಿದೆ.

ಕರ್ನಾಟಕ ಆಡಳಿತ ಸೇವಾ ಅಧಿಕಾರಿಗಳ ಸಂಘದ ಬೇಡಿಕೆಯನ್ನು ಅಪರ ಮುಖ್ಯ ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿನ ಸಲಹಾ ಸಮಿತಿಯು ಸಮಗ್ರವಾಗಿ ಪರಿಶೀಲಿಸಿದೆ. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 13 ಆಸೇವ 2003, ದಿನಾಂಕ 28–1–2004ರ ಕಾರ್ಯಕಾರಿ ಆದೇಶದ ಪ್ರಕಾರ ಕೆ.ಎ.ಎಸ್. ಆಯ್ಕೆ ಶ್ರೇಣಿ ವೃಂದದಿಂದ ಸೂಪರ್ ಟೈಂ ಸ್ಕೇಲ್ ವೃಂದಕ್ಕೆ ಬಡ್ತಿ ಹೊಂದಲು ಕಿರಿಯ ಶ್ರೇಣಿ ವೃಂದದಿಂದ ಕನಿಷ್ಠ 20 ವರ್ಷಗಳ ಅರ್ಹತಾದಾಯಕ ಸೇವೆಯನ್ನು ಪೂರೈಸಬೇಕಿದ್ದು, ಇದರಲ್ಲಿ 3 ವರ್ಷಗಳ ಕನಿಷ್ಠ ಸೇವಾವಧಿಯನ್ನು ಆಯ್ಕೆ ಶ್ರೇಣಿ ವೃಂದದಲ್ಲಿ ಪೂರೈಸಿರಬೇಕೆಂಬ ಷರತ್ತು ಇದೆ. ಅರ್ಹ ಅಧಿಕಾರಿಗಳು ಬಡ್ತಿಗೆ ಲಭ್ಯವಿಲ್ಲದಿದ್ದಲ್ಲಿ, 2 ವರ್ಷಗಳ ಅರ್ಹತಾದಾಯಕ ಸೇವೆಯನ್ನು ಪೂರೈಸಿರುವ ಅಧಿಕಾರಿಗಳನ್ನು ಬಡ್ತಿಗೆ ಪರಿಗಣಿಸಬಹುದಾಗಿದೆ. ಕೆ.ಎ.ಎಸ್. ಸೂಪರ್ ಟೈಂ ಸ್ಕೇಲ್ ವೃಂದದ ವೃಂದಬಲವು 45 ಇದ್ದು, ಮೇ–2008 ಅಂತ್ಯದ ವೇಳೆಗೆ 9 ರಿಕ್ತ ಸ್ಥಾನಗಳು ಲಭ್ಯವಾಗುತ್ತವೆ. ಹಾಗೆಯೆ ಕೆ.ಎ.ಎಸ್. ವೃಂದದಿಂದ ಐ.ಎ.ಎಸ್. ವೃಂದಕ್ಕೆ ವಾರ್ಷಿಕವಾಗಿ ಸುಮಾರು 5 ಅಧಿಕಾರಿಗಳು ಬಡ್ತಿ ಹೊಂದಲಿದ್ದು, ಮತ್ತು 2010ರ ವೇಳೆಗೆ ಸೂಪರ್ ಟೈಂ ಸ್ಕೇಲ್ ವೃಂದದಲ್ಲಿ 10 ಅಧಿಕಾರಿಗಳು ನಿವೃತ್ತರಾಗಲಿದ್ದು, ಆಗ ಸೂಪರ್ ಟೈಂ ಸ್ಕೇಲ್ ವೃಂದದಲ್ಲಿ ಕೇವಲ 11 ಅಧಿಕಾರಿಗಳು ಸೇವೆಯಲ್ಲಿ ಉಳಿಯುವ ಸಂಭವವಿರುವುದರಿಂದ ಕೆ.ಎ.ಎಸ್. ವಿವಿಧ ವೃಂದದಲ್ಲಿ ಅಸಮತೋಲನ ಉಂಟಾಗಿ ವೃಂದ ನಿರ್ವಹಣೆಯಲ್ಲಿ ತೊಡಕು ಉಂಟಾಗುವ ಸಂಭವವನ್ನು ಸಮಿತಿಯು ಗಮನಿಸಿತು. ಕೆ.ಎ.ಎಸ್. ಆಯ್ಕೆ ಶ್ರೇಣಿ ವೃಂದದಲ್ಲಿ ಹಾಲಿ ಜೇಷ್ಠತೆಯಲ್ಲಿ ಹಿರಿಯರಾಗಿದ್ದು, ಬಡ್ತಿಗೆ ಪರಿಗಣಿಸಬೇಕಾಗಿರುವ ಅಧಿಕಾರಿಗಳು ಮೇಲಿನ ಷರತ್ತಿನ ಪ್ರಕಾರ ಬಡ್ತಿಗೆ ನಿಗಧಿಪಡಿಸಿರುವ 20 ವರ್ಷಗಳ ಅರ್ಹತಾದಾಯಕ ಸೇವೆಯನ್ನು ಪೂರೈಸಿರುವುದಿಲ್ಲವಾದ್ದರಿಂದ ಬಡ್ತಿಗೆ ಅರ್ಹರಿರುವುದಿಲ್ಲ. ಆದ್ದರಿಂದ ಈ ಷರತ್ತನ್ನು ಸಡಿಲಿಸಿ ಆಯ್ಕೆ ಶ್ರೇಣಿ ವೃಂದದಿಂದ ಸೂಪರ್ ಟೈಂ ಸ್ಕೇಲ್ ವೃಂದಕ್ಕೆ ಬಡ್ತಿ ಹೊಂದಲು ನಿಗದಿಪಡಿಸಿರುವ ಸೇವಾವಧಿಯನ್ನು 20 ವರ್ಷಗಳ ಬದಲಾಗಿ 16 ವರ್ಷಗಳಿಗೆ ಸಡಿಲಿಸಲು ಸಮಿತಿಯು ಮಾಡಿರುವ ಶಿಫಾರಸ್ಸನ್ನು ಗಮನಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 216 ಅಸೇವ 2008, ಬೆಂಗಳೂರು, ದಿನಾಂಕ: 28ನೇ ಮೇ 2008.**

ಅಪರ ಮುಖ್ಯ ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿನ ಸಲಹಾ ಸಮಿತಿಯು ಮಾಡಿರುವ ಶಿಫಾರಸ್ಸನ್ನು ಆಧರಿಸಿ, ದಿನಾಂಕ 28–1–2004ರ ಸಂಖ್ಯೆ: ಸಿಆಸುಇ 13 ಆಸೇವ 2003ರ ಆದೇಶವನ್ನು ಭಾಗಷಹ ಮಾರ್ಪಡಿಸಿ, ಕೆ.ಎ.ಎಸ್. ಸೂಪರ್ ಟೈಂ ಸ್ಕೇಲ್ ವೃಂದಕ್ಕೆ ಬಡ್ತಿ ನೀಡಲು ಕೆ.ಎ.ಎಸ್. ಕಿರಿಯ ಶ್ರೇಣಿ ವೃಂದದಿಂದ ಒಟ್ಟು ಕನಿಷ್ಠ 20 ವರ್ಷಗಳ

ಅರ್ಹತಾದಾಯಕ ಸೇವೆ ನಿಗದಿಪಡಿಸಿರುವುದನ್ನು 16 ವರ್ಷಗಳಿಗೆ ಇಳಿಸಲಾಗಿದೆ. ಇದರಲ್ಲಿ ಕೆ.ಎ.ಎಸ್. ಆಯ್ಕೆ ಶ್ರೇಣಿ ವೃಂದದಲ್ಲಿ 3 ವರ್ಷಗಳ ಕನಿಷ್ಠ ಸೇವಾವಧಿ ಪೂರೈಸಿರಬೇಕು. ಒಂದು ವೇಳೆ 3 ವರ್ಷಗಳ ಸೇವೆ ಪೂರೈಸಿರುವ ಅಧಿಕಾರಿಗಳು ಲಭ್ಯವಿಲ್ಲದಿದ್ದಲ್ಲಿ, 2 ವರ್ಷಗಳ ಕನಿಷ್ಠ ಸೇವೆಯನ್ನು ಪೂರೈಸಿರುವ ಅಧಿಕಾರಿಗಳನ್ನು ಬಡ್ತಿಗೆ ಪರಿಗಣಿಸಬಹುದಾಗಿದೆ.

ಭಾರತದ ರಾಷ್ಟ್ರಪತಿಗಳ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 927

**ಎಚ್.ಆರ್. ನಾಗೇಂದ್ರ**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿ.ಆ.ಸು.ಇ. (ಸೇವೆಗಳು-2)

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** ಮೈಸೂರು ಜಿಲ್ಲೆ, ಹೆಚ್.ಡಿ. ಕೋಟೆ ತಾಲ್ಲೂಕು, ಹಂಪಾಪುರ ಹೋಬಳಿಯ ಎಂ. ಮಲ್ಲಹಳ್ಳಿ ಗ್ರಾಮದ ದೊಡ್ಡಕೆರೆ ಕಾವಲ್ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಜಮೀನುಗಳಿಗೆ ಸಿವಿಲ್ ನ್ಯಾಯಾಲಯದ ಆದೇಶದಂತೆ ಹೆಚ್ಚಿನ ಪರಿಹಾರಧನ ಪಾವತಿಸುವ ಕುರಿತು.

**ಓದಲಾಗಿದೆ:** ದಿನಾಂಕ 29-4-2008ರ ಪತ್ರ ವ್ಯವಹಾರದೊಂದಿಗೆ ಅಂತ್ಯಗೊಂಡಿರುವ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರು ಇವರ ಪತ್ರ ಸಂಖ್ಯೆ: ಮುಸನೀ(ದ)/ಲೆಶಾ/ಲೆಸ-1/3/ಭೂಸ್ವಾಧೀನ/3/2008-09/948.

**ಪ್ರಸ್ತಾವನೆ :**

ಮೇಲೆ ಓದಲಾದ ದಿನಾಂಕ 29-4-2008ರ ಬೆಂಗಳೂರು ಸಣ್ಣ ನೀರಾವರಿ ದಕ್ಷಿಣ ವಲಯದ ಮುಖ್ಯ ಇಂಜಿನಿಯರ್‌ರವರ ಪತ್ರದಲ್ಲಿ ಮೈಸೂರು ಜಿಲ್ಲೆ, ಹೆಚ್.ಡಿ. ಕೋಟೆ ತಾಲ್ಲೂಕು, ಹಂಪಾಪುರ ಹೋಬಳಿಯ ಎಂ ಮಲ್ಲಹಳ್ಳಿ ಗ್ರಾಮದ ದೊಡ್ಡಕೆರೆ ಕಾವಲ್ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಕೊಳ್ಳಲಾದ ಜಮೀನುಗಳಿಗೆ ಹುಣಸೂರು ಸಿವಿಲ್ (ಹಿರಿಯ ಶ್ರೇಣಿ) ನ್ಯಾಯಾಲಯವು ಎಲ್.ಎ.ಸಿ. ಪ್ರಕರಣದಲ್ಲಿ ನೀಡಿದ ತೀರ್ಪಿನ ಅನುಸಾರ ಹೆಚ್ಚಿನ ಪರಿಹಾರಧನ ಪಾವತಿಸಲು ಅನುದಾನ ಬಿಡುಗಡೆ ಮಾಡುವಂತೆ ಕೋರಿದ್ದಾರೆ. ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ನೀಡಿದ ಜಮೀನುಗಳ ಭೂಸ್ವಾಧೀನದ ಪ್ರಕ್ರಿಯೆಯ ವಿವರಗಳು ಈ ಕೆಳಕಂಡಂತಿದೆ:

- ಕರ್ನಾಟಕ ಭೂಸ್ವಾಧೀನ ಕಾಯ್ದೆಯ ಕಲಂ 4(1)ರಡಿ ಅಧಿಸೂಚನೆ ಹೊರಡಿಸಿದ ದಿನಾಂಕ 16-7-1992.
- ಕರ್ನಾಟಕ ಭೂಸ್ವಾಧೀನ ಕಾಯ್ದೆಯಡಿಯಲ್ಲಿ ಭೂಸ್ವಾಧೀನಾಧಿಕಾರಿಗಳು ಪರಿಹಾರ ಧನದ ಐತೀರ್ಪು ಘೋಷಿಸಿದ ದಿನಾಂಕ 25-8-1994.

ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳ ಭೂಮಾಲೀಕರು ಭೂಸ್ವಾಧೀನಾಧಿಕಾರಿಗಳ ಐತೀರ್ಪಿನಂತೆ ಹಣ ಪಡೆದು, ಹೆಚ್ಚಿನ ಪರಿಹಾರಧನಕ್ಕಾಗಿ ಭೂಸ್ವಾಧೀನ ಕಾಯ್ದೆ ಕಲಂ 18(1)ರಡಿ ಹುಣಸೂರು ಸಿವಿಲ್ ನ್ಯಾಯಾಲಯದಲ್ಲಿ ದಾಖಲಿಸಿದ್ದ ಪ್ರಕರಣದಲ್ಲಿ ಸಿವಿಲ್ ನ್ಯಾಯಾಲಯವು ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ನೀಡಿದೆ. ಸಿವಿಲ್ ನ್ಯಾಯಾಲಯದ ತೀರ್ಪಿನ ವಿರುದ್ಧ ಮೇಲ್ಮನವಿ ಸಲ್ಲಿಸದಿರಲು ಕಾನೂನು ಇಲಾಖೆಯು ಪತ್ರ ಸಂಖ್ಯೆ: ಲಾ 1384 ಎಲ್‌ಎಸ್‌ಎಂ 2005, ದಿನಾಂಕ 13-1-2006ರಲ್ಲಿ ಅಭಿಪ್ರಾಯ ನೀಡಿದೆ. ಸಿವಿಲ್ ನ್ಯಾಯಾಲಯವು ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ನೀಡಿರುವ ಪ್ರಕರಣಗಳ ವಿವರ ಕೆಳಕಂಡಂತಿದೆ:

| ಕ್ರ. ಸಂ. | ಎಲ್‌ಎಸಿ ಸಂ. | ಸ.ನಂ. | ವಿಸ್ತೀರ್ಣ ಎ-ಗುಂ | ಪರಿಹಾರ ಮೊತ್ತ ರೂ.ಗಳಲ್ಲಿ |
|---|---|---|---|---|
| 1 | 1027/97 | 2 | 1-09 | 276649 |
| 2 | 22/03 | 2 | 1-06 | 259718 |
| 3 | 23/03 | 2 | 1-06 | 259718 |
| 4 | 24/03 | 2 | 1-05 | 254074 |
| | | | | **1050159** |

* ಪರಿಹಾರ ಧನದ ಮೊತ್ತದಲ್ಲಿ ನ್ಯಾಯಾಲಯದ ವೆಚ್ಚ ಸಹ ಸೇರಿದೆ.

ಪ್ರಸ್ತಾವನೆಯನ್ನು ಪರಿಶೀಲಿಸಿ ಸರ್ಕಾರವು ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸನೀಇ 75 ಭೂಸ್ವಾಪ್ರ 2007, ಬೆಂಗಳೂರು, ದಿನಾಂಕ: 2ನೇ ಜುಲೈ 2008.**

ಮೈಸೂರು ಜಿಲ್ಲೆ, ಹೆಚ್.ಡಿ. ಕೋಟೆ ತಾಲ್ಲೂಕು, ಹಂಪಾಪುರ ಹೋಬಳಿಯ ಎಂ. ಮಲ್ಲಹಳ್ಳಿ ಗ್ರಾಮದ ದೊಡ್ಡಕೆರೆ ಕಾವಲ್ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಜಮೀನುಗಳಿಗೆ ಸಿವಿಲ್ ನ್ಯಾಯಾಲಯವು ಎಲ್.ಎ.ಸಿ. ಪ್ರಕರಣಗಳಲ್ಲಿ

ನೀಡಿರುವ ತೀರ್ಪಿನಂತೆ ಹಾಗೂ ಭೂಸ್ವಾಧೀನ ಕಾಯ್ದೆಯಲ್ಲಿಯ ಸೂಚನೆಗಳಂತೆ ಲೆಕ್ಕಹಾಕಿದ ಪರಿಹಾರ ಧನ ಮೊತ್ತ ರೂ. 10,50,159–00ಗಳನ್ನು (ಹತ್ತು ಲಕ್ಷದ ಐವತ್ತು ಸಾವಿರದ ನೂರ ಐವತ್ತೊಂಭತ್ತು ರೂ.ಗಳು ಮಾತ್ರ) ಪಾವತಿಸಲು ಸರ್ಕಾರವು ಅನುಮೋದನೆ ನೀಡಿದೆ. ಹಣ ಪಾವತಿಗೆ ಮೊದಲು ಮತ್ತೊಮ್ಮೆ ಲೆಕ್ಕಾಚಾರ ತಃಖ್ತೆಯನ್ನು ದೃಢೀಕರಿಸಿಕೊಂಡು ಪಾವತಿಸತಕ್ಕದ್ದು ಹಾಗೂ ಎರಡನೇ ಬಾರಿ ಪಾವತಿಯಾಗದಂತೆ ಎಚ್ಚರವಹಿಸತಕ್ಕದ್ದು.

ಈ ವೆಚ್ಚವನ್ನು 2008–09ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ 4702–00–800–1–00– ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು–ಇತ್ಯರ್ಥ 132 ಬಂಡವಾಳ ವೆಚ್ಚಗಳು ಅಡಿಯಲ್ಲಿ ಸಣ್ಣ ನೀರಾವರಿ ಇಲಾಖೆಗೆ ಒದಗಿಸಿರುವ ಅನುದಾನದಿಂದ ಭರಿಸಿಕೊಳ್ಳತಕ್ಕದ್ದು.

ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳು ಇನ್ನೂ ಸಣ್ಣ ನೀರಾವರಿ ಇಲಾಖೆಯ ಹೆಸರಿಗೆ ವರ್ಗಾವಣೆಯಾಗದಿದ್ದಲ್ಲಿ, ಕೂಡಲೇ ಸಂಬಂಧಿಸಿದ ಸಣ್ಣ ನೀರಾವರಿ ಅಧಿಕಾರಿಗಳು ವರ್ಗಾವಣೆ ಬಗ್ಗೆ ಕ್ರಮ ಕೈಗೊಳ್ಳತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂ: ಎಫ್‌ಡಿ 21 ಟಿಎಫ್‌ಪಿ 2006, ದಿನಾಂಕ 2–9–2006ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1035

**ಕೆ. ಸುಧಾಕರ ಶೆಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

## ವಸತಿ ಸಚಿವಾಲಯ

**ವಿಷಯ :** ರಾಜೀವ್ ಗಾಂಧಿ ಗ್ರಾಮೀಣ ವಸತಿ ನಿಗಮ ನಿಯಮಿತದ ಸಿಬ್ಬಂದಿಗಳಿಗೆ ವೇತನ ಶ್ರೇಣಿಗಳ ಪರಿಷ್ಕರಣೆ ಕುರಿತು.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ: ವಇ/183/ಹೆಚ್‌ಎಹೆಚ್/1999, ದಿನಾಂಕ 25–1–2000.
2. ಸರ್ಕಾರದ ಆದೇಶ ಸಂಖ್ಯೆ: ವಇ/117/ಹೆಚ್‌ಎಹೆಚ್/2000, ದಿನಾಂಕ 17–7–2000.
3. ಸರ್ಕಾರದ ಆದೇಶ ಸಂಖ್ಯೆ: ವಇ/72/ಎಚ್‌ಎಸ್/2007, ದಿನಾಂಕ 29–5–2008.
4. ರಾಜೀವ್ ಗಾಂಧಿ ಗ್ರಾಮೀಣ ವಸತಿ ನಿಗಮ ನಿಯಮಿತ ಇವರ ಪತ್ರ ಸಂಖ್ಯೆ: ಎಂಡಿ/ ಆರ್‌ಜಿಆರ್‌ಹೆಚ್‌ಸಿಎಲ್/57/ಎಡಿಎಂ/01/07 ದಿನಾಂಕ 25–10–2007.
5. ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ/8/ಎಸ್‌ಆರ್‌ಪಿ/2007, ದಿನಾಂಕ 16–5–2007.
6. ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ/5/ಎಸ್‌ಆರ್‌ಪಿ/2008, ದಿನಾಂಕ 25–3–2008.

**ಪ್ರಸ್ತಾವನೆ :**

ಮೇಲೆ, ಕ್ರಮ ಸಂಖ್ಯೆ (1)ರಲ್ಲಿ ಓದಲಾದ ಆದೇಶದಲ್ಲಿ ಸರ್ಕಾರವು, ಆರ್ಥಿಕವಾಗಿ ಹಿಂದುಳಿದ ಬಡ ಜನರು ಮತ್ತು ಕೆಲ ವಿಶೇಷ ವರ್ಗದ ಜನರಿಗಾಗಿ ವಸತಿ ನಿರ್ಮಾಣ ಕಾರ್ಯವನ್ನು ಕೈಗೊಳ್ಳಲು ರಾಜೀವ್ ಗಾಂಧಿ ಗ್ರಾಮೀಣ ವಸತಿ ನಿಗಮ ನಿಯಮಿತವನ್ನು ಸ್ಥಾಪಿಸಲು ಆದೇಶಿಸಿದೆ ಹಾಗೂ ಈ ನಿಗಮಕ್ಕೆ ಹುದ್ದೆಗಳ ಸೃಜನೆ ಮತ್ತು ವೇತನ ಶ್ರೇಣಿಗಳನ್ನು ಸಹ ಈ ಆದೇಶದಲ್ಲಿ ನಿಗಧಿ ಪಡಿಸಲಾಗಿರುತ್ತದೆ. ತದನಂತರ, ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಸರ್ಕಾರಿ ಆದೇಶದಲ್ಲಿ ರಾಜೀವ್ ಗಾಂಧಿ ಗ್ರಾಮೀಣ ವಸತಿ ನಿಗಮ ನಿಯಮಿತಕ್ಕೆ ಹೆಚ್ಚುವರಿಯಾಗಿ 9 ಹುದ್ದೆಗಳ ಸೃಜನೆ ಹಾಗೂ ಕೆಲವು ಹುದ್ದೆಗಳಿಗೆ ಮರು ಪದನಾಮೀಕರಣ ಮತ್ತು ನೇಮಕಾತಿ ವಿಧಾನದಲ್ಲಿ ಮಾರ್ಪಾಡಿಗೆ ಮಂಜೂರಾತಿ ನೀಡಲಾಗಿದೆ. ಮುಂದುವರಿದು, ಕ್ರಮ ಸಂಖ್ಯೆ (3)ರಲ್ಲಿ ಓದಲಾದ ಆದೇಶದನ್ವಯ, ಮತ್ತೆ ಹುದ್ದೆಗಳ ಸೃಜನೆ ಮತ್ತು ನೇಮಕಾತಿಗಾಗಿ ನಿಗಮಕ್ಕೆ ಇತ್ತೀಚೆಗೆ ಮಂಜೂರಾತಿ ನೀಡಿದೆ.

ಕ್ರಮ ಸಂಖ್ಯೆ (4)ರಲ್ಲಿ ಓದಲಾದ ಪತ್ರದಲ್ಲಿ ರಾಜೀವ್ ಗಾಂಧಿ ಗ್ರಾಮೀಣ ವಸತಿ ನಿಗಮ ನಿಯಮಿತವು, ರಾಜ್ಯ ಸರ್ಕಾರಿ ನೌಕರರಿಗೆ, 5ನೇ ವೇತನ ಆಯೋಗದ ಶಿಫಾರಸ್ಸಿನ ಮೇರೆಗೆ ಕ್ರಮ ಸಂಖ್ಯೆ (5)ರ ಆದೇಶ ಸಂಖ್ಯೆ: ಎಫ್‌ಡಿ 8 ಎಸ್‌ಆರ್‌ಪಿ 2007 ದಿನಾಂಕ 16–5–2007ರಲ್ಲಿ ವೇತನ ಪರಿಷ್ಕರಣೆ ಮಾಡಿರುವಂತೆ, ನಿಗಮದ ಸಿಬ್ಬಂದಿಗಳಿಗೂ ವೇತನ ಶ್ರೇಣಿಯನ್ನು ಪರಿಷ್ಕರಿಸುವಂತೆ ಕೋರಿ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಿದೆ. ಈ ಪ್ರಸ್ತಾವನೆಯನ್ನು ಆರ್ಥಿಕ ಇಲಾಖೆಯೊಡನೆ ಸಮಾಲೋಚಿಸಿದಂತೆ, ಪರಿಶೀಲಿಸಲಾಗಿದೆ.

ತತ್ಫಲವಾಗಿ ಮೇಲೆ ಕ್ರಮ ಸಂಖ್ಯೆ (6)ರಲ್ಲಿ ಓದಲಾದ, ಆರ್ಥಿಕ ಇಲಾಖೆಯ ಆದೇಶದನ್ವಯ ರಾಜೀವ್ ಗಾಂಧಿ ಗ್ರಾಮೀಣ ವಸತಿ ನಿಗಮವು, ನಿಗಮದ ನೌಕರರಿಗೆ ಹಾಲಿ ನೀಡಲಾಗುತ್ತಿರುವ ಸಂಚಿತ ವೇತನ ಶ್ರೇಣಿಯ ಪರಿಷ್ಕರಣೆ ಮತ್ತು ಇದರ ಪರಿಣಾಮವಾಗಿ ಪಾವತಿಸಬೇಕಾದ ಹೆಚ್ಚುವರಿ ಬಾಕಿ ವೇತನವನ್ನು (ಎಂದರೆ ದಿನಾಂಕ 1–4–2006 ರಿಂದ 31–3–2007ರ ವರೆಗಿನ) ನಿಗಮವು ನಿರ್ಧರಿಸಿ, ಪಾವತಿ ಮಾಡುವುದು. ಅದರಂತೆ, ಈ ಪ್ರಸ್ತಾವನೆಗೆ ಆರ್ಥಿಕ ಇಲಾಖೆಯು

ನೀಡಿರುವ ಸಹಮತಿ ಮೇರೆಗೆ, (ಮತ್ತು ಈ ಸಂಬಂಧ ನಿಗಮವು ಯಾವುದೇ ಹೆಚ್ಚುವರಿ ಅನುದಾನವನ್ನು ಸರ್ಕಾರದಿಂದ ಕೋರಬಾರದೆಂಬ ಷರತ್ತಿನೊಡನೆ) ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ವಇ 73 ಹೆಚ್‌ಎಎಸ್ 2007 ಬೆಂಗಳೂರು, ದಿನಾಂಕ: 8ನೇ ಜುಲೈ 2008.**

ರಾಜೀವ್ ಗಾಂಧಿ ಗ್ರಾಮೀಣ ವಸತಿ ನಿಗಮ ನಿಯಮಿತದ ಗುತ್ತಿಗೆ ಸಿಬ್ಬಂದಿಗಳಿಗೆ ಪ್ರಸ್ತಾವನೆಯಲ್ಲಿ ವಿವರಿಸಿದಂತೆ, ವೇತನ ಶ್ರೇಣಿಯನ್ನು ಪರಿಷ್ಕರಿಸಲು, ಈ ಕೆಳಕಂಡಂತೆ ಮಂಜೂರಾತಿ ಆದೇಶ ನೀಡಲಾಗಿದೆ.

| ಕ್ರ. ಸಂ. | ಪದನಾಮ | ಹಿಂದಿನ ವೇತನ ಶ್ರೇಣಿ–1999 | ಪರಿಷ್ಕೃತ ವೇತನ ಶ್ರೇಣಿ–2007 |
|---|---|---|---|
| 1 | ಪ್ರಧಾನ ವ್ಯವಸ್ಥಾಪಕರುಗಳು (ತಾಂತ್ರಿಕ/ಕಾರ್ಯಕ್ರಮ ಅನುಷ್ಠಾನ) | 12,800–16,720 | 24,450–31,800 |
| 2 | ಕಂಪನಿ ಕಾರ್ಯದರ್ಶಿ ಮತ್ತು ಪ್ರಧಾನ ವ್ಯವಸ್ಥಾಪಕ | 10,620–14,960 | 20,025–28,275 |
| 3 | ಪ್ರಧಾನ ವ್ಯವಸ್ಥಾಪಕರುಗಳು (ಆರ್ಥಿಕ/ಸಾಮಾಜಿಕ ಅಭಿವೃದ್ಧಿ) | 10.620–14,960 | 20,025–28,275 |
| 4 | ಸಹಾಯಕ ಪ್ರಧಾನ ವ್ಯವಸ್ಥಾಪಕ | 7,400–13,120 | 14,050–25,050 |
| 5 | ವ್ಯವಸ್ಥಾಪಕರುಗಳು | 5,200–9,580 | 10,000–18,150 |
| 6 | ಎಕ್ಸಿಕ್ಯೂಟೀವ್ ಅಸಿಸ್ಟೆಂಟ್‌ಗಳು | 3,850–7,050 | 7,275–13,350 |
| 7 | ಚಾಲಕರುಗಳು | 3,000–5,450 | 5,800–10,500 |
| 8 | ಅಟೆಂಡರ್‌ಗಳು | 2,500–3,850 | 4,800–7,275 |

ಮೇಲ್ಕಂಡ ಆದೇಶವನ್ನು ಆರ್ಥಿಕ ಇಲಾಖೆಯ ತನ್ನ ಟಿಪ್ಪಣಿ ಸಂಖ್ಯೆ: ಎಫ್‌ಡಿ/205/ಸೇ–2/2008, ದಿನಾಂಕ 25–6–2008ರಲ್ಲಿ ನೀಡಿದ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1043

**ರಂಗಮ್ಮ**
ಪೀಠಾಧಿಕಾರಿ–2
ವಸತಿ ಇಲಾಖೆ

**ಲೋಕೋಪಯೋಗಿ, ಬಂದರು ಹಾಗೂ ಒಳನಾಡು ಜಲಸಾರಿಗೆ ಸಚಿವಾಲಯ**

**ವಿಷಯ :** ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮದ ನಿರ್ದೇಶಕರ ಮಂಡಳಿಯನ್ನು ಪುನರ್‌ರಚಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ: ಲೋಇ 32 ಇಎಪಿ 2006, ದಿನಾಂಕ 3–7–2006.
2. ಅಧಿಸೂಚನೆ ಸಂಖ್ಯೆ: ಲೋಇ 175 ಇಎಪಿ 2007, ದಿನಾಂಕ 1–4–2008.
3. ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮದ ವ್ಯವಸ್ಥಾಪಕ ನಿರ್ದೇಶಕರು ಪತ್ರ ಸಂಖ್ಯೆ: ಕರಅನಿನಿ/ವ್ಯ.ನಿ./520/08–09, ದಿನಾಂಕ 10–6–2008.
4. ಸರ್ಕಾರದ ಆದೇಶ ಸಂಖ್ಯೆ ಲೋಇ 34 ಇಎಪಿ 2008, ದಿನಾಂಕ 10–6–2008.

**ಪ್ರಸ್ತಾವನೆ :**

ಮೇಲೆ ಓದಲಾದ ಆದೇಶ (1)ರಲ್ಲಿ ರಚಿಸಲಾಗಿದ್ದ ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ನಿಯಮಿತದ ನಿರ್ದೇಶಕರ ಮಂಡಳಿಯನ್ನು ಪುನರ್‌ರಚಿಸಲು ಪ್ರಸ್ತಾವನೆಯನ್ನು ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ನಿಯಮಿತರವರು ಓದಲಾದ ಪತ್ರ (3)ರಲ್ಲಿ ಸರ್ಕಾರಕ್ಕೆ ಸಲ್ಲಿಸಿರುತ್ತಾರೆ.

ಓದಲಾದ ಆದೇಶ (2)ರಲ್ಲಿ ಶ್ರೀ ಡಿ. ವೆಂಕಟೇಶ್ವರರಾವ್, ಪ್ರಧಾನ ಕಾರ್ಯದರ್ಶಿಗಳು, ಸಾರ್ವಜನಿಕ ಉದ್ದಿಮೆಗಳ ಇಲಾಖೆ ಇವರನ್ನು ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ನಿಯಮಿತದ ಒಬ್ಬ ನಿರ್ದೇಶಕರನ್ನಾಗಿ ನೇಮಿಸಲಾಗಿದೆ.

ಓದಲಾದ ಆದೇಶ (4)ರಲ್ಲಿ ಮಾನ್ಯ ಲೋಕೋಪಯೋಗಿ ಇಲಾಖೆ ಸಚಿವರನ್ನು ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ನಿಯಮಿತದ ನಿರ್ದೇಶಕರ ಮಂಡಳಿಯ ಅಧ್ಯಕ್ಷರನ್ನಾಗಿ ನೇಮಿಸಲಾಗಿದೆ.

ರಾಜ್ಯದಲ್ಲಿ ಹೊಸ ಸರ್ಕಾರ ಅಸ್ತಿತ್ವಕ್ಕೆ ಬಂದ ನಂತರ ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮದ ನಿರ್ದೇಶಕರ ಮಂಡಳಿಯನ್ನು ಪುನರ್ ರಚಿಸುವುದು ಅವಶ್ಯಕವಾಗಿದೆ. ಅಲ್ಲದೆ ನಿಗಮದಲ್ಲಿ ಕೈಗೊಳ್ಳಲಾಗಿರುವ ಅಭಿವೃದ್ಧಿ ಕಾರ್ಯಗಳು ತಾಂತ್ರಿಕ ವಿಷಯಗಳಿಗೆ ಸಂಬಂಧಿಸಿದ್ದು ನಿಗಮವು ಉತ್ತಮವಾಗಿ, ಸಮರ್ಪಕವಾಗಿ ಹಾಗೂ ರಚನಾತ್ಮಕವಾಗಿ ಕಾರ್ಯನಿರ್ವಹಿಸುವ ದೃಷ್ಟಿಯನ್ನು ಗಮನದಲ್ಲಿಟ್ಟುಕೊಂಡು ನಿಗಮದ ನಿರ್ದೇಶಕರ ಮಂಡಳಿಯನ್ನು ಮಾನ್ಯ ಲೋಕೋಪಯೋಗಿ ಸಚಿವರ ಅಧ್ಯಕ್ಷತೆಯಲ್ಲಿ ಹೊಸದಾಗಿ ಈ ಕೆಳಕಂಡ ನಿರ್ದೇಶಕರನ್ನೊಳಗೊಂಡಂತೆ ಪುನರ್ ರಚನೆ ಮಾಡಲು ಪ್ರಸ್ತಾಪಿಸಿದೆ.

| | | |
|---|---|---|
| 1) | ಶ್ರೀ ಉದಾಸಿ ಚನ್ನಬಸಪ್ಪ ಮಹಾಲಿಂಗಪ್ಪ, ಸನ್ಮಾನ್ಯ ಲೋಕೋಪಯೋಗಿ ಇಲಾಖೆ ಸಚಿವರು | ನಿರ್ದೇಶಕರು ಹಾಗೂ ಅಧ್ಯಕ್ಷರು |
| 2) | ಶ್ರೀ ಆರ್.ಬಿ. ಅಗವಾನೆ, ಭಾ.ಆ.ಸೇ. ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಲೋಕೋಪಯೋಗಿ, ಬಂದರು ಹಾಗೂ ಒಳನಾಡು ಜಲಸಾರಿಗೆ ಇಲಾಖೆ | ನಿರ್ದೇಶಕರು |
| 3) | ಶ್ರೀ ಕೆ. ಜ್ಯೋತಿರಾಮಲಿಂಗಮ್, ಭಾ.ಆ.ಸೇ. ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ನಗರಾಭಿವೃದ್ಧಿ ಇಲಾಖೆ | ನಿರ್ದೇಶಕರು |
| 4) | ಶ್ರೀ ವಿ.ಪಿ. ಬಳಿಗಾರ್, ಭಾ.ಆ.ಸೇ. ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಮೂಲಭೂತ ಸೌಕರ್ಯ ಅಭಿವೃದ್ಧಿ ಇಲಾಖೆ | ನಿರ್ದೇಶಕರು |
| 5) | ಶ್ರೀ ಡಿ. ವೆಂಕಟೇಶ್ವರರಾವ್, ಭಾ.ಆ.ಸೇ. ಪ್ರಧಾನ ಕಾರ್ಯದರ್ಶಿಗಳು, ಸಾರ್ವಜನಿಕ ಉದ್ದಿಮೆಗಳ ಇಲಾಖೆ | ನಿರ್ದೇಶಕರು |
| 6) | ಶ್ರೀ ಟಿ. ಸುಕುಮಾರ್, ಸರ್ಕಾರದ ಕಾರ್ಯದರ್ಶಿಗಳು, ಲೋಕೋಪಯೋಗಿ, ಬಂದರು ಹಾಗೂ ಒಳನಾಡು ಜಲಸಾರಿಗೆ ಇಲಾಖೆ | ನಿರ್ದೇಶಕರು |
| 7) | ಶ್ರೀ ಅನಿಲ್ ಕುಮಾರ್ ಝಾ ಭಾ.ಆ.ಸೇ. ಸರ್ಕಾರದ ಕಾರ್ಯದರ್ಶಿಗಳು, ಆರ್ಥಿಕ ಇಲಾಖೆ (ಸುಧಾರಣೆ ಮತ್ತು ಪಿಎಂಯು) | ನಿರ್ದೇಶಕರು |
| 8) | ಶ್ರೀ ಬಿ. ಬಸವರಾಜು, ಭಾ.ಆ.ಸೇ. ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ನಿಯಮಿತ | ನಿರ್ದೇಶಕರು |
| 9) | ಶ್ರೀ ಪಿ. ಜಯಪಾಲ್, ಪ್ರಾದೇಶಿಕ ಮುಖ್ಯಸ್ಥರು, ಹುಡ್ಕೋ | ನಿರ್ದೇಶಕರು |
| 10) | ಶ್ರೀ ಸಿ.ಇ.ಜಿ. ಜಸ್ಟೋ, ನಿವೃತ್ತ ಪ್ರೊಫೆಸರ್ | ನಿರ್ದೇಶಕರು |
| 11) | ಶ್ರೀ ನಾರಾಯಣಪ್ಪ, ನಿವೃತ್ತ ಅಧೀಕ್ಷಕ ಇಂಜಿನಿಯರ್ | ನಿರ್ದೇಶಕರು |

ಮೇಲಿನ ಹಿನ್ನೆಲೆಯಲ್ಲಿ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗುತ್ತಿದೆ.

**ಸರ್ಕಾರದ ಆದೇಶ ಸಂಖ್ಯೆ: ಲೋಇ 34 ಇಎಪಿ 2008, ಬೆಂಗಳೂರು, ದಿನಾಂಕ: 28ನೇ ಜೂನ್ 2008**.

ಸರ್ಕಾರವು ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮದ ನಿರ್ದೇಶಕರ ಮಂಡಳಿಗೆ ಮಾನ್ಯ ಲೋಕೋಪಯೋಗಿ ಸಚಿವರನ್ನು ಒಬ್ಬ ನಿರ್ದೇಶಕರನ್ನಾಗಿ ನೇಮಿಸಲಾಗಿದೆ ಹಾಗೂ ಇವರ ಅಧ್ಯಕ್ಷತೆಯಲ್ಲಿ ಈ ಕೆಳಕಂಡ ನಿರ್ದೇಶಕರನ್ನೊಳಗೊಂಡಂತೆ ಮಂಡಳಿಯನ್ನು ಪುನರ್ ರಚಿಸಿ ಆದೇಶಿಸಿದೆ.

| | | |
|---|---|---|
| 1) | ಶ್ರೀ ಉದಾಸಿ ಚನ್ನಬಸಪ್ಪ ಮಹಾಲಿಂಗಪ್ಪ, ಸನ್ಮಾನ್ಯ ಲೋಕೋಪಯೋಗಿ ಇಲಾಖೆ ಸಚಿವರು | ನಿರ್ದೇಶಕರು ಹಾಗೂ ಅಧ್ಯಕ್ಷರು |
| 2) | ಶ್ರೀ ಆರ್.ಬಿ. ಅಗವಾನೆ, ಭಾ.ಆ.ಸೇ. ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಲೋಕೋಪಯೋಗಿ, ಬಂದರು ಹಾಗೂ ಒಳನಾಡು ಜಲಸಾರಿಗೆ ಇಲಾಖೆ | ನಿರ್ದೇಶಕರು |
| 3) | ಶ್ರೀ ಕೆ. ಜ್ಯೋತಿರಾಮಲಿಂಗಮ್, ಭಾ.ಆ.ಸೇ. ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ನಗರಾಭಿವೃದ್ಧಿ ಇಲಾಖೆ | ನಿರ್ದೇಶಕರು |
| 4) | ಶ್ರೀ ವಿ.ಪಿ. ಬಳಿಗಾರ್, ಭಾ.ಆ.ಸೇ. ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಮೂಲಭೂತ ಸೌಕರ್ಯ ಅಭಿವೃದ್ಧಿ ಇಲಾಖೆ | ನಿರ್ದೇಶಕರು |
| 5) | ಶ್ರೀ ಡಿ. ವೆಂಕಟೇಶ್ವರರಾವ್, ಭಾ.ಆ.ಸೇ. ಪ್ರಧಾನ ಕಾರ್ಯದರ್ಶಿಗಳು, ಸಾರ್ವಜನಿಕ ಉದ್ದಿಮೆಗಳ ಇಲಾಖೆ | ನಿರ್ದೇಶಕರು |

| | | |
|---|---|---|
| 6) | ಶ್ರೀ ಟಿ. ಸುಕುಮಾರ್,<br>ಸರ್ಕಾರದ ಕಾರ್ಯದರ್ಶಿಗಳು, ಲೋಕೋಪಯೋಗಿ, ಬಂದರು ಹಾಗೂ ಒಳನಾಡು ಜಲಸಾರಿಗೆ ಇಲಾಖೆ | ನಿರ್ದೇಶಕರು |
| 7) | ಶ್ರೀ ಅನಿಲ್ ಕುಮಾರ್ ಝಾ ಭಾ.ಆ.ಸೇ.<br>ಸರ್ಕಾರದ ಕಾರ್ಯದರ್ಶಿಗಳು, ಆರ್ಥಿಕ ಇಲಾಖೆ (ಸುಧಾರಣೆ ಮತ್ತು ಪಿಎಂಯು) | ನಿರ್ದೇಶಕರು |
| 8) | ಶ್ರೀ ಬಿ. ಬಸವರಾಜು, ಭಾ.ಆ.ಸೇ.<br>ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ನಿಯಮಿತ | ನಿರ್ದೇಶಕರು |
| 9) | ಶ್ರೀ ಪಿ. ಜಯಪಾಲ್,<br>ಪ್ರಾದೇಶಿಕ ಮುಖ್ಯಸ್ಥರು, ಹುಡ್ಕೋ | ನಿರ್ದೇಶಕರು |
| 10) | ಶ್ರೀ ಸಿ.ಇ.ಜಿ. ಜಸ್ಟೋ, ನಿವೃತ್ತ ಪ್ರೊಫೆಸರ್ | ನಿರ್ದೇಶಕರು |
| 11) | ಶ್ರೀ ನಾರಾಯಣಪ್ಪ, ನಿವೃತ್ತ ಅಧೀಕ್ಷಕ ಇಂಜಿನಿಯರ್ | ನಿರ್ದೇಶಕರು |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1042

**ಎಂ. ದೇವಿಪ್ರಸಾದ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಲೋಕೋಪಯೋಗಿ, ಬಂದರು ಹಾಗೂ ಒಳನಾಡು
ಜಲಸಾರಿಗೆ ಇಲಾಖೆ (ಇಎಪಿ)

**ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ**

**ವಿಷಯ :** ಶ್ರೀ ವಿ.ಎ. ಮಾಚಕನೂರ್, ಕೆ.ಎ.ಎಸ್. (ಅ.ಶ್ರೇ.) ಅಧಿಕಾರಿ ಹಾಗೂ ಶ್ರೀ ಕೆ. ಹೇಮಾಜಿ ನಾಯಕ್ (ಹಿ.ಶ್ರೇ.) ಅಧಿಕಾರಿ ಇವರ ವಿರುದ್ಧ ಇಲಾಖಾ ವಿಚಾರಣೆ – ಆರೋಪಮುಕ್ತರನ್ನಾಗಿಸಿ ಅಂತಿಮ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ:** 1. ನೋಟೀಸ್ ಸಂ: ಸಿಆಸುಇ 53 ಎಸ್ಇಎನ್ 02, (ಸಿಆಸುಇ 22 ಕೆಇವಿ 07) ದಿ: 29–2–08.
2. ಶ್ರೀ ವಿ.ಎ. ಮಾಚಕನೂರ್, ಕೆ.ಎ.ಎಸ್. ಅಧಿಕಾರಿ ರವರ ಲಿಖಿತ ಹೇಳಿಕೆ ದಿ: 14–3–08.
3. ಶ್ರೀ ಕೆ. ಹೇಮಾಜಿ ನಾಯಕ್ ಕೆ.ಎ.ಎಸ್. ಅಧಿಕಾರಿ ರವರ ಲಿಖಿತ ಹೇಳಿಕೆ ದಿ: 12–3–08.

**ಪ್ರಸ್ತಾವನೆ :**

ಶ್ರೀ ವಿ.ಎ. ಮಾಚಕನೂರ್, ಕೆ.ಎ.ಎಸ್. (ಅ.ಶ್ರೇ) ಅಧಿಕಾರಿ ರವರು ದಿ: 20–6–92 ರಿಂದ ದಿ: 8–9–94 ರವರೆಗೆ ಕೆ.ಎಚ್.ಇ.ಪಿ. ದಾಂಡೇಲಿಯಲ್ಲಿ ವಿಶೇಷ ಭೂಸ್ವಾಧೀನಾಧಿಕಾರಿಯಾಗಿ ಕಾರ್ಯನಿರ್ವಹಿಸುತ್ತಿದ್ದಾಗ ಮತ್ತು ಶ್ರೀ ಕೆ. ಹೇಮಾಜಿ ನಾಯಕ್, ಕೆ.ಎ.ಎಸ್. (ಹಿ.ಶ್ರೇ) ಅಧಿಕಾರಿ ಇವರು ದಿ: 9–9–04 ರಿಂದ 19–10–94 ಮತ್ತು ದಿ: 17–2–95 ರಿಂದ ದಿ: 24–5–95 ರವರೆಗೆ ಪ್ರಭಾರ ವಿಶೇಷ ಭೂಸ್ವಾಧೀನಾಧಿಕಾರಿಯಾಗಿ ಕಾರ್ಯನಿರ್ವಹಿಸುತ್ತಿದ್ದಾಗ ಮಾನ್ಯ ಸಿವಿಲ್ ಜಡ್ಜ್, ಶಿರಸಿ ಇವರ ನ್ಯಾಯಾಲಯವು ಪ್ರಕರಣ ಸಂ: 402/1982 ರಲ್ಲಿ ದಿ: 9–8–1985ರಂದು ತೀರ್ಪು ನೀಡಿ ಭೂಸ್ವಾಧೀನ ಪ್ರಕರಣದಲ್ಲಿ ಪರಿಹಾರ ಹೆಚ್ಚಿಸಿ ಆದೇಶ ಹೊರಡಿಸಿದ ಆದೇಶದ ವಿರುದ್ಧ ಜಿಲ್ಲಾ ನ್ಯಾಯಾಲಯದಲ್ಲಿ ಸಲ್ಲಿಸಿದ ರಿವಿಜನ್ ಅಪೀಲು 87/1989ರಲ್ಲಿ ದಿ: 31–1–92ರಂದು ನೀಡಿದ ಆದೇಶ ಹಾಗೂ ಡಿಕ್ರಿಗಳ ದೃಢೀಕರಣ ಪ್ರತಿ ಪಡೆದು ಕರ್ನಾಟಕ ಉಚ್ಚ ನ್ಯಾಯಾಲಯದಲ್ಲಿ ಮೇಲ್ಮನವಿಗೆ ಸಂಬಂಧಿಸಿದ ದಾಖಲೆಗಳನ್ನು ಸಲ್ಲಿಸಲು ಅಡ್ವೋಕೇಟ್ ಜನರಲ್ ರವರ ಕಾರ್ಯಾಲಯದಿಂದ ದಿ: 19–9–92, 8–10–92, 21–10–92 ಮತ್ತು 27–4–93 ರಲ್ಲಿ ತಿಳಿಸಿದ್ದಾಗಲೂ ಸಹ ಅವರು ಕಡತದಲ್ಲಿನ ದಾಖಲೆಗಳನ್ನು ಪರಿಶೀಲಿಸದೇ ಅವಶ್ಯವುಳ್ಳ ದಾಖಲೆಗಳನ್ನು ಮಾನ್ಯ ಉಚ್ಚ ನ್ಯಾಯಾಲಯದಲ್ಲಿ ಹಾಜರುಪಡಿಸಲು ಯಾವುದೆ ಕ್ರಮ ಜರುಗಿಸಿರುವುದಿಲ್ಲ. ಈ ಪ್ರಕರಣದಲ್ಲಿ ಮಾನ್ಯ ಉಚ್ಚ ನ್ಯಾಯಾಲಯದಲ್ಲಿ ದಾಖಲಿಸಿದ ಮೇಲ್ಮನವಿ ಮಿಸಲೇನಿಯಸ್ 2ನೇ ಅಪೀಲು ನಂ. 147/2000 ನಲ್ಲಿ ದಿ: 10–1–01 ರಂದು ನೀಡಿದ ಆದೇಶದಲ್ಲಿ ಅವಶ್ಯಕ ದಾಖಲೆಗಳನ್ನು ಪೂರೈಸುವಲ್ಲಿ ಆದ ದೀರ್ಘಕಾಲಿಕ ವಿಳಂಬವನ್ನು ಗಂಭೀರವಾಗಿ ಪರಿಗಣಿಸಿ, ಆದ ವಿಳಂಬಕ್ಕೆ ಕಾರಣರಾದವರ ವಿರುದ್ಧ ಶಿಸ್ತು ಕ್ರಮ ಜರುಗಿಸಲು ನಿರ್ದೇಶನ ನೀಡಿತ್ತು. ಮೇಲ್ಕಂಡಂತೆ ಇವರು ಜಿಲ್ಲಾ ನ್ಯಾಯಾಲಯದಿಂದ ಆದೇಶ ಮತ್ತು ಡಿಕ್ರಿಗಳ ದೃಢೀಕೃತ ಪ್ರತಿ ಪಡೆದು ಸಲ್ಲಿಸಲು ಯಾವುದೇ ಕ್ರಮ ಕೈಗೊಳ್ಳದೇ ಸರ್ಕಾರಿ ಕೆಲಸದಲ್ಲಿ ತೋರಿರುವ ಕರ್ತವ್ಯಲೋಪಗಳ ಕುರಿತು ವಿಚಾರಣೆ ನಡೆಸಲು ಮೇಲೆ ಕ್ರಮ ಸಂ (1)ರಲ್ಲಿ ಓದಲಾದ ನೋಟೀಸಿನೊಂದಿಗೆ ದೋಷಾರೋಪಣೆಗಳನ್ನು ಜಾರಿ ಮಾಡುವುದರ ಮೂಲಕ ಇವರುಗಳ ವಿರುದ್ಧ ಇಲಾಖಾ ವಿಚಾರಣೆ ಪ್ರಾರಂಭಿಸಲಾಯಿತು. ಮೇಲೆ ಓದಲಾದ ಕ್ರಮ ಸಂ (1)

ಮತ್ತು (2)ರಲ್ಲಿ ಆಪಾದಿತ ಅಧಿಕಾರಿಗಳು ನೋಟೀಸ್‌ಗೆ ಉತ್ತರ ಸಲ್ಲಿಸಿ ಅವರುಗಳ ಮೇಲೆ ಹೊರಿಸಲಾದ ಆರೋಪಗಳನ್ನು ನಿರಾಕರಿಸಿರುತ್ತಾರೆ.

ಶ್ರೀ ವಿ.ಎ. ಮಾಚಕನೂರ್, ಕೆ.ಎ.ಎಸ್. (ಅ.ಶ್ರೇ.) ಅಧಿಕಾರಿ ರವರು ಮೇಲೆ ಓದಲಾದ ಕ್ರಮ ಸಂ (1)ರ ತಮ್ಮ ಉತ್ತರದಲ್ಲಿ ತಿಳಿಸಿರುವಂತೆ ದಿ: 20–6–1992 ರಿಂದ 8–9–2004ರವರೆಗೆ ವಿಶೇಷ ಭೂಸ್ವಾಧೀನಾಧಿಕಾರಿಯಾಗಿ ಕಾರ್ಯನಿರ್ವಹಿಸುತ್ತಿದ್ದಾಗ ಮಾನ್ಯ ಸಿವಿಲ್ ಜಡ್ಜ್, ಶಿರಸಿ ನ್ಯಾಯಾಲಯದ ಪ್ರಕರಣ ಸಂ. 402/1982ರಲ್ಲಿ ಪರಿಹಾರ ಧನ ನಿರ್ಣಯಿಸಿ ದಿ: 9–8–1985 ರಲ್ಲಿ ಆದೇಶಿಸಿದ್ದು, ಈ ಆದೇಶದ ವಿರುದ್ಧ ಜಿಲ್ಲಾ ನ್ಯಾಯಾಲಯದಲ್ಲಿ ಸಲ್ಲಿಸಿದ ರಿವಿಜನ್ ಅಪೀಲು 87/1989ರಲ್ಲಿ ದಿ: 31–1–1992 ರಂದು ನೀಡಿದ ಆದೇಶ ಹಾಗೂ ಡಿಕ್ರಿಗಳ ದೃಢೀಕೃತ ಪ್ರತಿ ಪಡೆದು ಮಾನ್ಯ ಉಚ್ಚ ನ್ಯಾಯಾಲಯದಲ್ಲಿ ಮೇಲ್ಮನವಿಗೆ ಸಂಬಂಧಿಸಿದ ದಾಖಲೆಗಳನ್ನು ಸಲ್ಲಿಸಲು ವಿಳಂಬ ಮಾಡಿದ ಕಾರಣ ಹಾಗೂ ಇದನ್ನು ಸಮರ್ಥಿಸಲು ಅಡ್ವೋಕೇಟ್ ಜನರಲ್ ಕಛೇರಿಯ ಪತ್ರ ಸಂ: 19–9–92, 8–10–92, 21–10–92 ಮತ್ತು 27–4–1993 ಗಳನ್ನು ಉಲ್ಲೇಖಿಸಿರುತ್ತಾರೆ. ಆದರೆ ಈ ನಾಲ್ಕು ಪತ್ರಗಳು ಎಲ್.ಎ.ಸಿ. ಸಂ: 402/82ರ ಆದೇಶದ ದೃಢೀಕೃತ ಪ್ರತಿ ಕಳುಹಿಸುವ ಸಂಬಂಧ ಉಚ್ಚ ನ್ಯಾಯಾಲಯದ ಸರ್ಕಾರಿ ವಕೀಲರು ಕಾರವಾರ ರವರು ಜಿಲ್ಲಾ ಸರ್ಕಾರಿ ವಕೀಲರಿಗೆ ಕಳುಹಿಸಿರುವ ಟೆಲಿಗ್ರಾಂ ಹಾಗೂ ಜಿಲ್ಲಾ ಸರ್ಕಾರಿ ವಕೀಲರು ರವರು ಅಡ್ವೋಕೇಟ್ ಜನರಲ್ ರವರಿಗೆ ಬರೆದಿರುವ ಪತ್ರ ಮತ್ತು ಸರ್ಕಾರಿ ವಕೀಲರಿಂದ ಕಾನೂನು ಇಲಾಖೆಯ ಅಧೀನ ಕಾರ್ಯದರ್ಶಿಗಳಿಗೆ ಬರೆದಿರುವ ಪತ್ರಗಳಾಗಿದ್ದು, ಈ ನಾಲ್ಕು ಪತ್ರದ/ ತಂತಿ ಸಂದೇಶದ ಯಾವುದೇ ಪ್ರತಿ ಭೂಸ್ವಾಧೀನ ಅಧಿಕಾರಿಗಳ ಕಛೇರಿಯ ನಡುವೆ ವ್ಯವಹರಿಸಿರುವುದಿಲ್ಲ ಹಾಗೂ ಉಲ್ಲೇಖಿಸಿರುವುದಿಲ್ಲ. ಆದುದರಿಂದ ಯಾವುದೇ ಪತ್ರಗಳು ತಮ್ಮ ಕಾಲಾವಧಿಯಲ್ಲಿ ಕಾರ್ಯಾಲಯಕ್ಕೆ ಬಂದಿಲ್ಲದೇ ಇರುವುದರಿಂದ ತಮ್ಮ ಮೇಲೆ ಹೊರಿಸಲಾದ ಆರೋಪದಿಂದ ದೋಷಮುಕ್ತರನ್ನಾಗಿಸಲು ಕೋರಿರುತ್ತಾರೆ.

ಶ್ರೀ ಕೆ. ಹೇಮಾಜಿ ನಾಯಕ್, ಕೆ.ಎ.ಎಸ್. (ಹಿ.ಶ್ರೇ) ಅಧಿಕಾರಿ ರವರು ಮೇಲೆ ಓದಲಾದ ಕ್ರಮ ಸಂ (2)ರಲ್ಲಿ ತಿಳಿಸಿರುವಂತೆ ಅವರು ದಿ: 9–9–04 ರಿಂದ 19–10–94 ಮತ್ತು 17–2–95 ರಿಂದ 24–5–95 ರವರೆಗೆ ಪ್ರಭಾರ ವಿಶೇಷ ಭೂಸ್ವಾಧೀನಾಧಿಕಾರಿಯಾಗಿ ಕಾರ್ಯನಿರ್ವಹಿಸುತ್ತಿದ್ದಾಗ ಮಾನ್ಯ ಸಿವಿಲ್ ಜಡ್ಜ್, ಶಿರಸಿ ನ್ಯಯಾಲಯದ ಪ್ರಕರಣ ಸಂ: 402/1982ರಲ್ಲಿ ಪರಿಹಾರ ಧನ ನಿರ್ಣಯಿಸಿ ದಿ: 9–8–1985ರಲ್ಲಿ ಆದೇಶಿಸಿದ್ದು, ಈ ಆದೇಶದ ವಿರುದ್ಧ ಜಿಲ್ಲಾ ನ್ಯಾಯಾಲಯದಲ್ಲಿ ಸಲ್ಲಿಸಿದ ರಿವಿಜನ್ ಅಪೀಲು 87/1989ರಲ್ಲಿ ದಿ: 31–1–1992 ರಂದು ನೀಡಿದ ಆದೇಶ ಹಾಗೂ ಡಿಕ್ರಿಗಳ ದೃಢೀಕೃತ ಪ್ರತಿ ಪಡೆದು ಮಾನ್ಯ ಉಚ್ಚ ನ್ಯಾಯಾಲಯದಲ್ಲಿ ಮೇಲ್ಮನವಿಗೆ ಸಂಬಂಧಿಸಿದ ದಾಖಲೆಗಳನ್ನು ಸಲ್ಲಿಸಲು ವಿಳಂಬ ಮಾಡಿದ ಕಾರಣ ಹಾಗೂ ಇದನ್ನು ಸಮರ್ಥಿಸಲು ಅಡ್ವೋಕೇಟ್ ಜನರಲ್ ಕಛೇರಿಯ ಪತ್ರ ಸಂ: 19–9–92, 8–10–92, 21–10–92 ಮತ್ತು 27–4–1993ಗಳನ್ನು ಉಲ್ಲೇಖಿಸಲಾಗಿದೆ. ಈ ನಾಲ್ಕು ಪತ್ರದ/ತಂತಿ ಸಂದೇಶದ ಯಾವುದೇ ಪ್ರತಿ ಭೂಸ್ವಾಧೀನ ಅಧಿಕಾರಿಗಳ ಕಛೇರಿಯ ನಡುವೆ ವ್ಯವಹರಿಸಿರುವುದಿಲ್ಲ ಹಾಗೂ ಉಲ್ಲೇಖಿಸಿರುವುದಿಲ್ಲ. ಆದುದರಿಂದ ಯಾವುದೇ ಪತ್ರಗಳು ತಮ್ಮ ಕಾಲಾವಧಿಯಲ್ಲಿ ಕಾರ್ಯಾಲಯಕ್ಕೆ ಬಂದಿಲ್ಲದೇ ಇರುವುದರಿಂದ ಹಾಗೂ ಈ ಅವಧಿಯಲ್ಲಿ ತಾವು ಚುನಾವಣಾ ಕಾರ್ಯಗಳನ್ನು ನಿರ್ವಹಿಸುವ ಹಾಗೂ ಕರಾವಳಿ ಉತ್ಸವದಲ್ಲಿ ಭಾಗವಹಿಸಿದ ಅತಿ ಗಣ್ಯವ್ಯಕ್ತಿಗಳ ಕುರಿತು ಹೆಚ್ಚಿನ ಲಕ್ಷ್ಯ ನೀಡಬೇಕಾಗಿದ್ದರಿಂದ ವಿಶೇಷ ಭೂಸ್ವಾಧೀನಾಧಿಕಾರಿ ಕೆ.ಹೆಚ್.ಇ.ಪಿ. ದಾಂಡೇಲಿ ಹುದ್ದೆಯ ಕೆಲಸದಲ್ಲಿ ಗಮನ ಹರಿಸಲು ಸಾಧ್ಯವಾಗಿರುವುದಿಲ್ಲವೆಂದು ತಿಳಿಸುತ್ತಾ ತಮ್ಮನ್ನು ಆರೋಪದಿಂದ ಮುಕ್ತಗೊಳಿಸಲು ಕೋರಿರುತ್ತಾರೆ.

ಶ್ರೀ ವಿ.ಎ. ಮಾಚಕನೂರ್, ಕೆ.ಎ.ಎಸ್. (ಆ.ಶ್ರೇ.) ಹಾಗೂ ಶ್ರೀ ಕೆ. ಹೇಮಾಜಿ ನಾಯಕ್, ಕೆ.ಎ.ಎಸ್. (ಹಿ.ಶ್ರೇ.) ರವರು ನೀಡಿರುವ ಉತ್ತರವನ್ನು ದಾಖಲೆಗಳೊಂದಿಗೆ ಪರಿಶೀಲಿಸಿ ಆರೋಪಿತ ಅಧಿಕಾರಿಗಳು ನೀಡಿರುವ ಉತ್ತರಗಳು ಸಮಂಜಸವೆಂದು ಕಂಡುಬಂದಿರುವ ಹಿನ್ನೆಲೆಯಲ್ಲಿ, ಹಾಗೂ ಈ ವಿಳಂಬಕ್ಕೆ ಇವರು ಕಾರಣಕರ್ತರಲ್ಲವೆಂದು ಕಂಡುಬಂದಿರುವ ಹಿನ್ನೆಲೆಯಲ್ಲಿ ಇವರ ಉತ್ತರವನ್ನು ಒಪ್ಪಿ, ಇವರನ್ನು ಆರೋಪಗಳಿಂದ ಮುಕ್ತರನ್ನಾಗಿಸಲು ಸರ್ಕಾರವು ತೀರ್ಮಾನಿಸಿದೆ. ಅದರಂತೆ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 53 ಎಸ್‌ಇಎನ್ 2002 (ಸಿಅಸುಇ 22 ಕೆಇವಿ 2007), ಬೆಂಗಳೂರು, ದಿನಾಂಕ: 3ನೇ ಜುಲೈ 2008.**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಕಾರಣಗಳಿಂದಾಗಿ ಶ್ರೀ ವಿ.ಎ. ಮಾಚಕನೂರ್, ಕೆ.ಎ.ಎಸ್. (ಆಯ್ಕೆ ಶ್ರೇಣಿ) ಅಧಿಕಾರಿ ಹಾಗೂ ಶ್ರೀ ಕೆ. ಹೇಮಾಜಿ ನಾಯಕ್, ಕೆ.ಎ.ಎಸ್. (ಹಿ.ಶ್ರೇ.) ಅಧಿಕಾರಿ ಇವರುಗಳನ್ನು ದಿ: 29–2–2008ರ ನೋಟೀಸಿನಲ್ಲಿ ಮಾಡಲಾದ ಆರೋಪಗಳಿಂದ ಆರೋಪಮುಕ್ತರನ್ನಾಗಿಸುತ್ತದೆ.

ಈ ಇಲಾಖಾ ವಿಚಾರಣೆ ನಡೆಯದಿದ್ದಲ್ಲಿ ಅವರು ಯಾವ ಸೌಲಭ್ಯಗಳನ್ನು ಪಡೆಯಲು ಅರ್ಹರಿರುತ್ತಿದ್ದರೋ ಅವುಗಳನ್ನು ಪಡೆಯಲು ಅರ್ಹರಿರುತ್ತಾರೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1040

**ಹೆಚ್.ಆರ್. ನಾಗೇಂದ್ರ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಆಸುಇ (ಸೇವೆಗಳು–2)

**ವಿಷಯ :** ಕರ್ನಾಟಕ ಸರ್ಕಾರ ಸಚಿವಾಲಯದಲ್ಲಿನ ಇಲಾಖೆಗಳ ಸರ್ಕಾರದ ಪ್ರಧಾನ ಕಾರ್ಯದರ್ಶಿ/ಸರ್ಕಾರದ ಕಾರ್ಯದರ್ಶಿ ಹುದ್ದೆಗಳನ್ನು ಉನ್ನತೀಕರಿಸುವ/ ಕೆಳದರ್ಜೆಗಿಳಿಸುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಆಸುಇ 258 ಸೇಅಸೆ 08, ದಿನಾಂಕ 6–6–2008.

2. ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಆಸುಇ 261 ಸೇಅಸೆ 08, ದಿನಾಂಕ 9–6–2008.

3. ಮಹಾಲೇಖಪಾಲರ ಪತ್ರ ಸಂಖ್ಯೆ: ಜಿಎಂ/ಐಎಎಸ್ 1/ 2008–09/406, ದಿನಾಂಕ 3–7–2008.

4. ಅನಧಿಕೃತ ಟಿಪ್ಪಣಿ ಸಂಖ್ಯೆ: ಸಿಆಸುಇ 301 ಸೇಅಸೆ 08, ದಿನಾಂಕ 4–7–2008.

**ಪ್ರಸ್ತಾವನೆ :**

ಮೇಲೆ (1 ಮತ್ತು 2)ರಲ್ಲಿ ಓದಲಾದ ಸರ್ಕಾರಿ ಅಧಿಸೂಚನೆಗಳಲ್ಲಿ ಸಚಿವಾಲಯದ ಕೆಳಕಂಡ ಇಲಾಖೆಗಳಿಗೆ ಸೂಪರ್ ಟೈಂ ವೇತನ ಶ್ರೇಣಿ ರೂ. 22400–24500ಗಳ ಐ.ಎ.ಎಸ್. ಅಧಿಕಾರಿಗಳನ್ನು ಪ್ರಧಾನ ಕಾರ್ಯದರ್ಶಿಯನ್ನಾಗಿ ನೇಮಕ ಮಾಡಿರುವುದರಿಂದ, ಸರ್ಕಾರದ ಕಾರ್ಯದರ್ಶಿ ಹುದ್ದೆಗಳನ್ನು ನಿಲಂಬನೆಯಲ್ಲಿಟ್ಟು, ಪ್ರಧಾನ ಕಾರ್ಯದರ್ಶಿ ಹುದ್ದೆಯನ್ನು ಸೃಜಿಸಿ ಮುಂದುವರಿಸುವಂತೆ ಮೇಲೆ (3 ಮತ್ತು 4)ರಲ್ಲಿ ಓದಲಾದ ಪತ್ರ ಹಾಗೂ ಅನಧಿಕೃತ ಟಿಪ್ಪಣಿಗಳಲ್ಲಿ ಕೋರಲಾಗಿದೆ.

1) ಸರ್ಕಾರದ ಪ್ರಧಾನ ಕಾರ್ಯದರ್ಶಿ, ಕನ್ನಡ, ಸಂಸ್ಕೃತಿ ಮತ್ತು ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ.
2) ಸರ್ಕಾರದ ಪ್ರಧಾನ ಕಾರ್ಯದರ್ಶಿ, ಇ–ಆಡಳಿತ.
3) ಸರ್ಕಾರದ ಪ್ರಧಾನ ಕಾರ್ಯದರ್ಶಿ, ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ.
4) ಸರ್ಕಾರದ ಪ್ರಧಾನ ಕಾರ್ಯದರ್ಶಿ, ಸಮಾಜ ಕಲ್ಯಾಣ ಇಲಾಖೆ (ಅಲ್ಪಸಂಖ್ಯಾತರ ಕಲ್ಯಾಣ).

ಮುಂದುವರಿದು, ಕೆಳಕಂಡ ಸಚಿವಾಲಯದ ಇಲಾಖೆಗಳಿಗೆ ಸೂಪರ್ ಟೈಂ ವೇತನ ಶ್ರೇಣಿ ರೂ. 18400–22400ಗಳ ಐ.ಎ.ಎಸ್. ಅಧಿಕಾರಿಗಳನ್ನು ಸರ್ಕಾರದ ಕಾರ್ಯದರ್ಶಿ ಹುದ್ದೆಗೆ ನೇಮಿಸಿರುವುದರಿಂದ, ಪ್ರಧಾನ ಕಾರ್ಯದರ್ಶಿ ಹುದ್ದೆಯನ್ನು ನಿಲಂಬನೆಯಲ್ಲಿಟ್ಟು, ಸರ್ಕಾರದ ಕಾರ್ಯದರ್ಶಿ ಹುದ್ದೆಗೆ ಕೆಳಗಿಳಿಸಿ ಹುದ್ದೆಯನ್ನು ಸೃಜಿಸುವಂತೆ ಕೋರಿರುತ್ತಾರೆ.

1) ಸರ್ಕಾರದ ಕಾರ್ಯದರ್ಶಿ, ಸಮಾಜ ಕಲ್ಯಾಣ ಇಲಾಖೆ.
2) ಸರ್ಕಾರದ ಕಾರ್ಯದರ್ಶಿ, ಕಾರ್ಮಿಕ ಇಲಾಖೆ.
3) ಸರ್ಕಾರದ ಕಾರ್ಯದರ್ಶಿ, ಕೃಷಿ ಇಲಾಖೆ.

ಅದರಂತೆ ಸರ್ಕಾರವು ಪರಿಶೀಲಿಸಿ ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 584 ಸಅಸೇ 2008, ಬೆಂಗಳೂರು, ದಿನಾಂಕ: 7ನೇ ಜುಲೈ 2008.**

ಕರ್ನಾಟಕ ಸರ್ಕಾರ ಸಚಿವಾಲಯದ ಕೆಳಕಂಡ ಇಲಾಖೆಗಳಲ್ಲಿನ ಸರ್ಕಾರದ ಕಾರ್ಯದರ್ಶಿ ಹುದ್ದೆಯನ್ನು ನಿಲಂಬನೆಯಲ್ಲಿಟ್ಟು, ಸೂಪರ್ ಟೈಂ ವೇತನ ಶ್ರೇಣಿ ರೂ. 22400–24500ಗಳ ಪ್ರಧಾನ ಕಾರ್ಯದರ್ಶಿ ಹುದ್ದೆಯನ್ನು, ಆ ಹುದ್ದೆಗೆ ನೇಮಕ ಆಗಿರುವ ಅಧಿಕಾರಿಗಳು ಕಾರ್ಯಭಾರ ವಹಿಸಿಕೊಂಡ ದಿನಾಂಕದಿಂದ ಜಾರಿಗೆ ಬರುವಂತೆ ಉನ್ನತೀಕರಿಸಿ ಮುಂದಿನ ಆದೇಶದವರೆಗೆ ಮುಂದುವರಿಸಲಾಗಿದೆ.

1) ಸರ್ಕಾರದ ಪ್ರಧಾನ ಕಾರ್ಯದರ್ಶಿ, ಕನ್ನಡ, ಸಂಸ್ಕೃತಿ ಮತ್ತು ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ.
2) ಸರ್ಕಾರದ ಪ್ರಧಾನ ಕಾರ್ಯದರ್ಶಿ, ಇ–ಆಡಳಿತ.
3) ಸರ್ಕಾರದ ಪ್ರಧಾನ ಕಾರ್ಯದರ್ಶಿ, ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ.
4) ಸರ್ಕಾರದ ಪ್ರಧಾನ ಕಾರ್ಯದರ್ಶಿ, ಸಮಾಜ ಕಲ್ಯಾಣ ಇಲಾಖೆ (ಅಲ್ಪಸಂಖ್ಯಾತರ ಕಲ್ಯಾಣ).

ಹಾಗೂ ಕೆಳಕಂಡ ಸಚಿವಾಲಯದ ಇಲಾಖೆಗಳಲ್ಲಿನ ಸರ್ಕಾರದ ಪ್ರಧಾನ ಕಾರ್ಯದರ್ಶಿ ಹುದ್ದೆಯನ್ನು ನಿಲಂಬನೆಯಲ್ಲಿಟ್ಟು, ಸೂಪರ್ ಟೈಂ ವೇತನ ಶ್ರೇಣಿ ರೂ. 18400–22400ಗಳ ಸರ್ಕಾರದ ಕಾರ್ಯದರ್ಶಿ ಹುದ್ದೆಯನ್ನು ಆ ಹುದ್ದೆಗೆ ನೇಮಕ ಆಗಿರುವ ಅಧಿಕಾರಿಗಳು ಕಾರ್ಯಭಾರ ವಹಿಸಿಕೊಂಡ ದಿನಾಂಕದಿಂದ ಜಾರಿಗೆ ಬರುವಂತೆ ಕೆಳದರ್ಜೆಗಿಳಿಸಿ ಮುಂದಿನ ಆದೇಶದವರೆಗೆ ಮುಂದುವರಿಸಲಾಗಿದೆ.

1) ಸರ್ಕಾರದ ಕಾರ್ಯದರ್ಶಿ, ಸಮಾಜ ಕಲ್ಯಾಣ ಇಲಾಖೆ.
2) ಸರ್ಕಾರದ ಕಾರ್ಯದರ್ಶಿ, ಕಾರ್ಮಿಕ ಇಲಾಖೆ.
3) ಸರ್ಕಾರದ ಕಾರ್ಯದರ್ಶಿ, ಕೃಷಿ ಇಲಾಖೆ.

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ 10–7–1996ರಲ್ಲಿ ಪ್ರತ್ಯಾಯೋಜಿಸಿರುವ ಅಧಿಕಾರದನ್ವಯ ಆರ್ಥಿಕ ಇಲಾಖೆ ಸಹಮತಿ ನೀಡಿದೆ ಎಂದು ಪರಿಭಾವಿಸಿ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1039

**ಎಂ.ಎಸ್. ಶಿವರಾಮ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ
(ಸೇವೆಗಳು–3)

**ವಿಷಯ :** ಕರ್ನಾಟಕ ಸರ್ಕಾರ ಸಚಿವಾಲಯದ ಕಾರ್ಮಿಕ ಇಲಾಖೆಯಲ್ಲಿ ಬಾಲ ಕಾರ್ಮಿಕರ ಕಲ್ಯಾಣಕ್ಕಾಗಿ ಸೃಜಿಸಲಾಗಿರುವ ಬಾಲ ಕಾರ್ಮಿಕ ಕೋಶವನ್ನು ಮುಂದುವರಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 100 ಸಸಿವಿ 97 ದಿನಾಂಕ 17–6–1997
2. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 19 ಸಸಿವಿ 04 ದಿನಾಂಕ 19–11–2004.
3. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 33 ಸಸಿವಿ 07 ದಿನಾಂಕ 31–5–2007.
4. ಕಾರ್ಮಿಕ ಇಲಾಖೆಯ ಕಡತ ಸಂಖ್ಯೆ: ಎಲ್‌ಡಿ 27 ಸಿಎಲ್‌ಸಿ 2008.

**ಪ್ರಸ್ತಾವನೆ :**

ಮೇಲೆ (1 ಮತ್ತು 2)ರಲ್ಲಿ ಓದಲಾದ ಸರ್ಕಾರಿ ಆದೇಶಗಳಲ್ಲಿ ಸಚಿವಾಲಯದ ಕಾರ್ಮಿಕ ಇಲಾಖೆಯಲ್ಲಿ ಬಾಲ ಕಾರ್ಮಿಕ ಕಲ್ಯಾಣಕ್ಕಾಗಿ ಬಾಲ ಕಾರ್ಮಿಕ ಕೋಶವನ್ನು ಸೃಜಿಸಿ ಕಾಲಕಾಲಕ್ಕೆ ಮುಂದುವರಿಸುತ್ತಾ ಬಂದು ಅಂತಿಮವಾಗಿ ಮೇಲೆ (3)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಈ ಕೆಳಕಂಡ ಹುದ್ದೆಗಳನ್ನು 18–6–2007ರಿಂದ ಒಂದು ವರ್ಷದ ಅವಧಿಗೆ ಮುಂದುವರಿಸಲಾಗಿತ್ತು.

| ಕ್ರ.ಸಂ. | ಹುದ್ದೆಯ ಪದನಾಮ | ಹುದ್ದೆಗಳ ಸಂಖ್ಯೆ |
|---|---|---|
| 1 | ವಿಶೇಷಾಧಿಕಾರಿ (ವೇತನಶ್ರೇಣಿ ರಹಿತ ಹುದ್ದೆ) | 1 ಹುದ್ದೆ |
| 2 | ಉಪ ವಿಶೇಷಾಧಿಕಾರಿ (ವೇತನಶ್ರೇಣಿ ರಹಿತ ಹುದ್ದೆ) | 1 ಹುದ್ದೆ |
| 3 | ಸಹಾಯಕರು | 2 ಹುದ್ದೆಗಳು |
| 4 | ಶೀಘ್ರಲಿಪಿಗಾರರು | 1 ಹುದ್ದೆ |
| 5 | ವಾಹನ ಚಾಲಕರು | 1 ಹುದ್ದೆ |
| 6 | ಗ್ರೂಪ್–ಡಿ | 1 ಹುದ್ದೆ |

ಕಾರ್ಮಿಕ ಇಲಾಖೆಯ ಪ್ರಧಾನ ಕಾರ್ಯದರ್ಶಿಗಳು ಮೇಲೆ (4)ರಲ್ಲಿ ಓದಲಾದ ಕಡತ ಕಳುಹಿಸಿ ಮೇಲಿನ ಹುದ್ದೆಗಳನ್ನು 18–6–2008ರಿಂದ ಒಂದು ವರ್ಷದ ಅವಧಿಗೆ ಬಾಲ ಕಾರ್ಮಿಕ ಕೋಶದೊಡನೆ ಮುಂದುವರಿಸುವಂತೆ ಕೋರಿದ್ದಾರೆ. ಅದರಂತೆ ಸರ್ಕಾರವು ಪರಿಶೀಲಿಸಿ ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 570 ಸಅಸೇ 2008, ಬೆಂಗಳೂರು, ದಿನಾಂಕ: 7ನೇ ಜುಲೈ 2008.**

ಕರ್ನಾಟಕ ಸರ್ಕಾರ ಸಚಿವಾಲಯದ ಕಾರ್ಮಿಕ ಇಲಾಖೆಯಲ್ಲಿ ಸೃಜಿಸಲಾಗಿರುವ ಬಾಲ ಕಾರ್ಮಿಕ ಕೋಶವನ್ನು ಈ ಕೆಳಕಂಡ ಹುದ್ದೆಗಳೊಂದಿಗೆ ದಿನಾಂಕ 18–6–2008ರಿಂದ ಜಾರಿಗೆ ಬರುವಂತೆ ಮತ್ತೆ ಒಂದು ವರ್ಷದ ಅವಧಿಗೆ ತಾತ್ಕಾಲಿಕವಾಗಿ ಮುಂದುವರಿಸಿ ಆದೇಶಿಸಿದೆ.

| ಕ್ರ.ಸಂ. | ಹುದ್ದೆಯ ಪದನಾಮ | ಹುದ್ದೆಗಳ ಸಂಖ್ಯೆ |
|---|---|---|
| 1 | ವಿಶೇಷಾಧಿಕಾರಿ (ವೇತನಶ್ರೇಣಿ ರಹಿತ ಹುದ್ದೆ) | 1 ಹುದ್ದೆ |
| 2 | ಉಪ ವಿಶೇಷಾಧಿಕಾರಿ (ವೇತನಶ್ರೇಣಿ ರಹಿತ ಹುದ್ದೆ) | 1 ಹುದ್ದೆ |
| 3 | ಸಹಾಯಕರು | 2 ಹುದ್ದೆಗಳು |
| 4 | ಶೀಘ್ರಲಿಪಿಗಾರರು | 1 ಹುದ್ದೆ |
| 5 | ವಾಹನ ಚಾಲಕರು | 1 ಹುದ್ದೆ |
| 6 | ಗ್ರೂಪ್–ಡಿ | 1 ಹುದ್ದೆ |

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ 10–7–1996ರಲ್ಲಿ ಪ್ರತ್ಯಾಯೋಜಿಸಿರುವ ಅಧಿಕಾರದನ್ವಯ ಆರ್ಥಿಕ ಇಲಾಖೆ ಸಹಮತಿ ನೀಡಿದೆ ಎಂದು ಪರಿಭಾವಿಸಿ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1037

**ಎಂ.ಎಸ್. ಶಿವರಾಮ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ

(ಸೇವೆಗಳು–3)

**ವಿಷಯ :** ಶ್ರೀ ಬಿ.ಹೆಚ್. ಸಿದ್ದಪ್ಪ, ಕೆಎಎಸ್ (ಕಿರಿಯ ಶ್ರೇಣಿ) ಹಿಂದಿನ ಉಪ ವಿಭಾಗಾಧಿಕಾರಿ, ಹಾವೇರಿ ಉಪ ವಿಭಾಗ, ಹಾವೇರಿ–ಇವರ ವಿರುದ್ಧ ಇಲಾಖಾ ವಿಚಾರಣೆ–ವಿಚಾರಣಾಧಿಕಾರಿ ಮತ್ತು ಮಂಡನಾಧಿ ಕಾರಿಯನ್ನು ನೇಮಿಸುವ ಬಗ್ಗೆ.

**ಓದಲಾಗಿದೆ:** ದಿನಾಂಕ 25–2–08ರ ನೋಟೀಸು ಸಂಖ್ಯೆ: ಸಿಆಸುಇ 252 ಕೆಇವಿ 07.

**ಪ್ರಸ್ತಾವನೆ :**

ಮೇಲೆ ಓದಲಾದ ನೋಟೀಸಿನಲ್ಲಿ ಶ್ರೀ ಬಿ.ಹೆಚ್. ಸಿದ್ದಪ್ಪ, ಕೆಎಎಸ್ (ಕಿರಿಯ ಶ್ರೇಣಿ), ಇವರು ಉಪ ವಿಭಾಗಾಧಿಕಾರಿ, ಹಾವೇರಿ ಉಪ ವಿಭಾಗ, ಹಾವೇರಿ ಮತ್ತು ಆಡಳಿತಾಧಿಕಾರಿ, ರಾಣೆಬೆನ್ನೂರು ನಗರ ಯೋಜನಾ ಪ್ರಾಧಿಕಾರ ಹುದ್ದೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ, ರಾಣೆಬೆನ್ನೂರು ನಗರ ಯೋಜನಾ ಪ್ರಾಧಿಕಾರದ ರಿ ಸರ್ವೆ ನಂ. 89/2, ಪ್ಲಾಟ್ ನಂ. 23ರ ಕಟ್ಟಡ ಅಂದಾಜು ಪಟ್ಟಿ ರೂ. 25.19 ಲಕ್ಷಗಳ ಕಾಮಗಾರಿಯನ್ನು ಕೈಗೊಳ್ಳಲು ಕರೆಯಲಾದ ಟೆಂಡರಿಗೆ ಕಡಿಮೆ ದರ ನಮೂದಿಸಿ ಟೆಂಡರ್ ಸಲ್ಲಿಸಿದ (1) ಶ್ರೀ ಎ.ಎಫ್. ಮರಿಬಸಣ್ಣನವರ ಮತ್ತು (2) ಶ್ರೀ ಎಸ್.ಟಿ. ಏಕಬೋಟಿ ರವರುಗಳ ಟೆಂಡರುಗಳನ್ನು ಪರಿಗಣಿಸದೇ, ಇವರಿಗಿಂತ ಹೆಚ್ಚಿನ ಟೆಂಡರ್ ದರ ಹಾಗೂ ಅಂದಾಜು ಪಟ್ಟಿಗಿಂತ ಶೇ. 10.94% ಹೆಚ್ಚಿನ ದರ ನಮೂದಿಸಿ ಟೆಂಡರ್ ಸಲ್ಲಿಸಿದ ಶ್ರೀ ಎಂ.ಎಸ್. ಕೋಳಿವಾಡ್ ಎಂಬುವವರಿಗೆ ಉದ್ದೇಶಪೂರ್ವಕವಾಗಿ ಟೆಂಡರನ್ನು ಮಂಜೂರು ಮಾಡುವ ಮೂಲಕ ಅಧಿಕಾರ ದುರುಪಯೋಗ ಮತ್ತು ಆರ್ಥಿಕ ನಷ್ಟಕ್ಕೆ ಜವಾಬ್ದಾರರಾದ ಆರೋಪದ ಸಂಬಂಧ ಕಾರಣ ಕೇಳುವ ನೋಟೀಸು ಜಾರಿ ಮಾಡಿ ಇವರ ವಿರುದ್ಧ ಶಿಸ್ತು ವಿಚಾರಣೆಯನ್ನು ಪ್ರಾರಂಭಿಸಲಾಯಿತು.

ಸದರಿ ನೋಟೀಸಿನಲ್ಲಿ ನಿಗಧಿಪಡಿಸಿದ ಅವಧಿಯಲ್ಲಿ ಆರೋಪವನ್ನು ಒಪ್ಪಿಕೊಳ್ಳುವ/ ನಿರಾಕರಿಸುವ ಬಗ್ಗೆ ಆರೋಪಿತ ಅಧಿಕಾರಿಯಿಂದ ಯಾವುದೇ ಲಿಖಿತ ಉತ್ತರ / ಸಮಜಾಯಿಷಿ ಬಾರದ ಕಾರಣ, ಆರೋಪದಲ್ಲಿನ ಸತ್ಯಾಸತ್ಯತೆಯನ್ನು ವಿಚಾರಣೆ ಮೂಲಕ ತಿಳಿಯುವ ದೃಷ್ಟಿಯಿಂದ ವಿಚಾರಣೆಯನ್ನು ಮುಂದುವರಿಸಲು ಸರ್ಕಾರವು ತೀರ್ಮಾನಿಸಿ, ಈ ಕೆಳಗಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 252 ಕೆಇವಿ 07, ಬೆಂಗಳೂರು, ದಿನಾಂಕ: 4ನೇ ಜುಲೈ 2008.**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಕಾರಣಗಳಿಂದಾಗಿ, ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ, 1957ರ ನಿಯಮ 11(2)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಸರ್ಕಾರವು ಶ್ರೀ ಬಿ.ಹೆಚ್. ಸಿದ್ದಪ್ಪ, ಕೆಎಎಸ್ (ಕಿರಿಯ ಶ್ರೇಣಿ) ಅಧಿಕಾರಿ, ಹಿಂದಿನ ಉಪ ವಿಭಾಗಾಧಿಕಾರಿ, ಹಾವೇರಿ ಉಪ ವಿಭಾಗ, ಹಾವೇರಿ ಮತ್ತು ಆಡಳಿತಾಧಿಕಾರಿ, ರಾಣೆಬೆನ್ನೂರು ನಗರ ಯೋಜನಾ ಪ್ರಾಧಿಕಾರ ಇವರ ವಿರುದ್ಧ ಪ್ರಸ್ತಾವನೆಯಲ್ಲಿ ಮಾಡಲಾದ ಆರೋಪಗಳ ಕುರಿತಂತೆ ವಿಚಾರಣೆ ನಡೆಸಲು ಜಿಲ್ಲಾಧಿಕಾರಿಗಳು, ಹಾವೇರಿ ಜಿಲ್ಲೆ, ಹಾವೇರಿ ಇವರನ್ನು ವಿಚಾರಣಾಧಿಕಾರಿಯನ್ನಾಗಿ ಈ ಮೂಲಕ ನೇಮಿಸುತ್ತದೆ.

ಶಿಸ್ತು ಪ್ರಾಧಿಕಾರಿಯ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿಯವರ ಮುಂದೆ ಮಂಡಿಸಲು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ, 1957ರ ನಿಯಮ 11(5)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಸರ್ಕಾರವು, ಉಪ ವಿಭಾಗಾಧಿಕಾರಿಗಳು, ಹಾವೇರಿ ಉಪ ವಿಭಾಗ, ಹಾವೇರಿ ಇವರನ್ನು ಮಂಡನಾಧಿಕಾರಿಯನ್ನಾಗಿ ಈ ಮೂಲಕ ನೇಮಿಸುತ್ತದೆ.

ವಿಚಾರಣೆಯನ್ನು ಆದಷ್ಟು ತ್ವರಿತವಾಗಿ ಮುಕ್ತಾಯಗೊಳಿಸಿ ವರದಿ ಸಲ್ಲಿಸುವಂತೆ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1038

**ಹೆಚ್.ಆರ್. ನಾಗೇಂದ್ರ**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಆಸುಇ (ಸೇವೆಗಳು–2)

### ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ

**ವಿಷಯ :** ರೇಷ್ಮೆ ತರಬೇತಿ ಸಂಸ್ಥೆ, ರಾಯಾಪುರದ ಆವರಣದಲ್ಲಿರುವ ಮಹಿಳಾ ವಸತಿ ಗೃಹ ಕಟ್ಟಡವನ್ನು ತಾತ್ಕಾಲಿಕವಾಗಿ ನಗರ ಕೇಂದ್ರ, ಗ್ರಂಥಾಲಯ, ಧಾರವಾಡಕ್ಕೆ ವಹಿಸಿಕೊಡುವ ಬಗ್ಗೆ.

**ಓದಲಾಗಿದೆ:** ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ನಿರ್ದೇಶಕರು ಇವರ ಪತ್ರ ಸಂಖ್ಯೆ: ರೇನಿ/ತಾಮಗ/ತಾಂ3/82/07–08, ದಿನಾಂಕ 15–11–2007.

**ಪ್ರಸ್ತಾವನೆ :**

ಮೇಲೆ ಓದಲಾದ ಪತ್ರದಲ್ಲಿ ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹುಬ್ಬಳ್ಳಿ ತಾಲ್ಲೂಕು ಇಲಾಖೆಯ ತರಬೇತಿ ಸಂಸ್ಥೆ, ರಾಯಪುರದ ಆವರಣದಲ್ಲಿರುವ ಮಹಿಳಾ ವಸತಿ ಗೃಹ ಕಟ್ಟಡವನ್ನು ತಾತ್ಕಾಲಿಕವಾಗಿ ಸಾರ್ವಜನಿಕ ಗ್ರಂಥಾಲಯ ಇಲಾಖೆಗೆ ವಹಿಸಿಕೊಡುವಂತೆ ಜಿಲ್ಲಾಧಿಕಾರಿ, ಧಾರವಾಡ ಜಿಲ್ಲೆ ಇವರು ಕೋರಿರುವುದಾಗಿ, ಸದರಿ ಕಟ್ಟಡವು ದುರಸ್ತಿ ಹಂತದಲ್ಲಿದ್ದು, ಸದ್ಯಕ್ಕೆ ಸದರಿ ಕಟ್ಟಡವನ್ನು ಗ್ರಂಥಾಲಯಕ್ಕಾಗಿ ನೀಡಬಹುದಾಗಿದೆಯಾದ್ದರಿಂದ ಧಾರವಾಡ ಜಿಲ್ಲೆ, ಹುಬ್ಬಳ್ಳಿ ತಾಲ್ಲೂಕಿನ ರಾಯಾಪುರದ ಮಹಿಳಾ ವಸತಿ ಗೃಹ ಕಟ್ಟಡವನ್ನು ಯಥಾಸ್ಥಿತಿಯಲ್ಲಿ ಸಾರ್ವಜನಿಕ ಗ್ರಂಥಾಲಯ ಇಲಾಖೆಗೆ ದುರಸ್ತಿ ಮಾಡಿಕೊಂಡು ಉಪಯೋಗಿಸಲು ತಾತ್ಕಾಲಿಕವಾಗಿ ಬಿಟ್ಟುಕೊಡಲು ಸರ್ಕಾರದ ಅನುಮತಿಯನ್ನು ಕೋರಿರುತ್ತಾರೆ.

ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರ ಪತ್ರದಲ್ಲಿಯ ಪ್ರಸ್ತಾವನೆಯನ್ನು ಪರಿಶೀಲಿಸಲಾಗಿದ್ದು, ಕಟ್ಟಡವನ್ನು ದುರಸ್ಥಿ ಮಾಡಿಸಿಕೊಂಡು ಉಪಯೋಗಿಸಲು ತಾತ್ಕಾಲಿಕವಾಗಿ ನೀಡಲು ಕೋರಿರುವುದರಿಂದ ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಕೋರಿರುವಂತೆ ಕಟ್ಟಡವನ್ನು ತಾತ್ಕಾಲಿಕವಾಗಿ ಸಾರ್ವಜನಿಕ ಗ್ರಂಥಾಲಯ ಇಲಾಖೆಗೆ ನೀಡಲು ತೀರ್ಮಾನಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ವಾಕೈ 66 ರೇಯೋವಿ 2007, ಬೆಂಗಳೂರು, ದಿನಾಂಕ: 28ನೇ ಜುಲೈ 2008.**

ಧಾರವಾಡ ಜಿಲ್ಲೆ ಹುಬ್ಬಳ್ಳಿ ತಾಲ್ಲೂಕಿನ ರೇಷ್ಮೆ ತರಬೇತಿ ಸಂಸ್ಥೆ, ರಾಯಾಪುರದ ಆವರಣದಲ್ಲಿರುವ ಮಹಿಳಾ ವಸತಿ ಗೃಹ ಕಟ್ಟಡವನ್ನು ಯಥಾಸ್ಥಿತಿಯಲ್ಲಿ ಸಾರ್ವಜನಿಕ ಗ್ರಂಥಾಲಯ ಇಲಾಖೆಗೆ ದುರಸ್ತಿ ಮಾಡಿಸಿಕೊಂಡು ಉಪಯೋಗಿಸಲು ಪತ್ರ ಸಂಖ್ಯೆ: ವಾಕೈ 27 ರೇಯೋವಿ 2007, ದಿನಾಂಕ 24–5–2008ರಲ್ಲಿ ಸೂಚಿಸಿರುವ ಮಾರ್ಗಸೂಚಿ, ಕರಾರು ಒಪ್ಪಂದ, ಷರತ್ತು ಮತ್ತು ನಿಬಂಧನೆಗಳನ್ವಯ ತಾತ್ಕಾಲಿಕವಾಗಿ ನೀಡಲು ಮಂಜೂರಾತಿ ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1138

**ಭಾರತಿ ಆರ್. ನಾಯಕ್**
ಪೀಠಾಧಿಕಾರಿ (ರೇಷ್ಮೆ)
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

### HORTICULTURE SECRETARIAT

**Sub :** "Karnataka State Horticulture Mission Agency" – Horticulture Minister to be the Chairman.

**Read :** Government Order No. AHD 38 HPP 2007, dated 14-2-2008.

**Government Order No. AHD 113 HPP 2008, Bangalore, Dated 4th August 2008**

In pursuant of the Government Order read above, Government is pleased to nominate Minister for Horticulture, Government of Karnataka as the Chairman of the State Executive Committee of the Karnataka State Horticulture Mission Agency and to nominate the Principal Secretary/ Secretary to Government, Horticulture Department as its Member. The rest of the Constitution of the said Committee shall remain the same as per the Government Order read above.

This order comes into immediate effect.

By order and in the name of the Governor of Karnataka,

PR. 1142

**S. RAJU**
Under Secretary to Government,
Horticulture Department.

### ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ

**ವಿಷಯ :** ಸಕ್ಕರೆ ಕಾರ್ಖಾನೆಗಳ ವ್ಯಾಪ್ತಿಯಲ್ಲಿರುವ ರಸ್ತೆಗಳ ಕಾಮಗಾರಿ ಅನುಷ್ಠಾನಕ್ಕಾಗಿ 2008–09ನೇ ಸಾಲಿನ ಅನುದಾನ ಬಿಡುಗಡೆ ಮಾಡುವ ಕುರಿತು.

**ಓದಲಾಗಿದೆ:**
1. ಆಯುಕ್ತರು, ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರು ರವರ ಪತ್ರ ಸಂಖ್ಯೆ: ಡಿಎಸ್‌ಕೆ/ರಕರ/ಅನುದಾನ/2008–09, ದಿನಾಂಕ 25–4–08.
2. ಸರ್ಕಾರದ ಆದೇಶ ಸಂಖ್ಯೆ: ವಾಕೈ 108 ಆಂಆಸ (1) 08, ದಿನಾಂಕ 11–4–08.
3. ಸರ್ಕಾರದ ಆದೇಶ ಸಂಖ್ಯೆ: ಸಿಐ 93 ಎಸ್‌ಜಿಎಫ್ 08, ದಿನಾಂಕ 24–6–2008.

**ಪ್ರಸ್ತಾವನೆ :**

ರಾಜ್ಯದ ಈ ಕೆಳಕಂಡ ಸಕ್ಕರೆ ಕಾರ್ಖಾನೆಗಳ ವ್ಯಾಪ್ತಿಯಲ್ಲಿರುವ ರಸ್ತೆಗಳ ಕಾಮಗಾರಿಗಳ ಅನುಷ್ಠಾನಕ್ಕಾಗಿ 2008-09ನೇ ಸಾಲಿನಲ್ಲಿ ಒದಗಿಸಲಾಗಿರುವ 160.00 ಲಕ್ಷ ರೂಗಳಲ್ಲಿ ರೂ. 159.78 ಲಕ್ಷಗಳನ್ನು ಬಿಡುಗಡೆಗೊಳಿಸಲು ಸಕ್ಕರೆ ನಿರ್ದೇಶಕರು ಮೇಲೆ ಓದಲಾದ (1)ರ ದಿನಾಂಕ 25-4-08ರ ಪತ್ರದಲ್ಲಿ ಪ್ರಸ್ತಾಪಿಸಿದ್ದಾರೆ.

(ರೂ. ಲಕ್ಷಗಳಲ್ಲಿ)

| ಕ್ರ.ಸಂ. | ಕಾರ್ಖಾನೆಯ ಹೆಸರು | ವರ್ಷ | ಮೊತ್ತ |
|---|---|---|---|
| 1 | ಕರ್ನಾಟಕ ಸಹಕಾರಿ ಸಕ್ಕರೆ ಕಾರ್ಖಾನೆ | 1998-1999 | 2.00 |
| 2 | ನಂದಿ ಸಹಕಾರಿ ಸಕ್ಕರೆ ಕಾರ್ಖಾನೆ (ನಿ) | 1999-2000 | 29.23 |
| 3 | ಗೋದಾವರಿ ಸಕ್ಕರೆ ಕಾರ್ಖಾನೆ (ನಿ) (ಚಿಕ್ಕೋಡಿ ವಿಭಾಗ) | 1999-2000 | 32.69 |
| 4 | ರೈತರ ಸಹಕಾರಿ ಸಕ್ಕರೆ ಕಾರ್ಖಾನೆ (ನಿ) | 1999-2000 | 17.00 |
| 5 | ಹಿರಣ್ಯಕೇಶಿ ಸಹಕಾರಿ ಸಕ್ಕರೆ ಕಾರ್ಖಾನೆ (ನಿ) | 1999-2000 | 43.40 |
| 6 | ಐ.ಎಸ್.ಆರ್. ಶುಗರ್ಸ್ (ಲಿ) | 2000-2001 | 14.18 |
| 7 | ಶ್ಯಾಮನೂರು ಶುಗರ್ಸ್ (ಲಿ) | 2000-2001 | 21.28 |
| | **ಒಟ್ಟು** | | **159.78** |

ಮೇಲೆ ಓದಲಾದ (2)ರಲ್ಲಿರುವ ಸರ್ಕಾರದ ಆದೇಶದಲ್ಲಿ 2008-09ನೇ ಸಾಲಿಗೆ ಈ ಉದ್ದೇಶಕ್ಕಾಗಿ 160/- ಲಕ್ಷ ರೂಗಳ ಅನುದಾನವನ್ನು ಇಲಾಖೆಯ ಲೆಕ್ಕಶೀರ್ಷಿಕೆ 4860-04-800-0-01-Plan-172- Roads ಅಡಿಯಲ್ಲಿ ಒದಗಿಸಲಾಗಿದೆ. ಸದರಿ ಹಣದಲ್ಲಿ 159.78 ಲಕ್ಷ ರೂಗಳ ಬಿಡುಗಡೆಗೆ ಆಯುಕ್ತರು ಕಬ್ಬು ಅಭಿವೃದ್ಧಿರವರು ಉಲ್ಲೇಖಿತ (1)ರಲ್ಲಿನ ಪತ್ರದಲ್ಲಿ ಕೋರಿರುತ್ತಾರೆ.

2008-09ನೇ ಸಾಲಿನಲ್ಲಿ ಒದಗಿಸಲಾಗಿದ್ದ, 160/- ಲಕ್ಷ ರೂಗಳ ಅನುದಾನದಲ್ಲಿ ಮೊದಲ ಕಂತು 40.00 ಲಕ್ಷ ರೂಗಳನ್ನು ಪ್ರಸ್ತಾವನೆಯಲ್ಲಿ ನಮೂದಿಸಿರುವ ಕಾರ್ಖಾನೆಗಳ ವ್ಯಾಪ್ತಿಯ ರಸ್ತೆ ಕಾಮಗಾರಿಗಳಿಗೆ ಆದ್ಯತೆ ಮೇರೆಗೆ ಬಿಡುಗಡೆ ಮಾಡುವ ಸಲುವಾಗಿ ಆಯುಕ್ತರು ಕಬ್ಬು ಅಭಿವೃದ್ಧಿ ರವರಿಗೆ ಮೇಲೆ ಓದಲಾದ (3)ರಲ್ಲಿರುವ ಸರ್ಕಾರದ ಆದೇಶದಲ್ಲಿ ಬಿಡುಗಡೆ ಮಾಡಲಾಗಿದೆ.

ಮೇಲೆ ಓದಲಾದ (1)ರ ಆಯುಕ್ತರು ಕಬ್ಬು ಅಭಿವದ್ಧಿರವರ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಪ್ರಸ್ತಾವನೆಯಲ್ಲಿ ನಮೂದಿಸಿರುವ ಕಾರ್ಖಾನೆಗಳ ವ್ಯಾಪ್ತಿಯ ರಸ್ತೆ ಕಾಮಗಾರಿಗಳಿಗೆ ಆದ್ಯತೆ ಮೇರೆಗೆ ಬಿಡುಗಡೆ ಮಾಡುವ ಸಲುವಾಗಿ ಮತ್ತೆ 40.00 ಲಕ್ಷ ರೂಗಳನ್ನು ಬಿಡುಗಡೆ ಮಾಡಲು ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಐ 93 ಎಸ್‌ಜಿಎಫ್ 08 ಬೆಂಗಳೂರು, ದಿನಾಂಕ: 2ನೇ ಆಗಸ್ಟ್ 2008.**

ಆಯುಕ್ತರು ಕಬ್ಬು ಅಭಿವೃದ್ಧಿರವರು ಪ್ರಸ್ತಾವನೆಯಲ್ಲಿ ಕೋರಿರುವಂತೆ ರಾಜ್ಯದ 7 ಸಕ್ಕರೆ ಕಾರ್ಖಾನೆಗಳ ವ್ಯಾಪ್ತಿಯಲ್ಲಿ ಬರುವ ರಸ್ತೆಗಳನ್ನು ಅಭಿವೃದ್ಧಿ ಪಡಿಸುವ ಕ್ರಿಯಾ ಯೋಜನೆಯನ್ನು ಕಾರ್ಯಗತಗೊಳಿಸಲು 2008-09ನೇ ಸಾಲಿನಲ್ಲಿ ಲೆಕ್ಕಶೀರ್ಷಿಕೆ 4860-04-800-0-01-(ಯೋಜನೆ)-172 ರಸ್ತೆಗಳು ಅಡಿ ಒದಗಿಸಲಾಗಿರುವ 160.00 ಲಕ್ಷ ರೂಗಳ ಅನುದಾನದಲ್ಲಿ 40.00 ಲಕ್ಷ ರೂಗಳನ್ನು ಮೇಲೆ ಓದಲಾದ (3) ರಲ್ಲಿರುವ ಸರ್ಕಾರದ ಆದೇಶದಲ್ಲಿ ಈಗಾಗಲೇ ಬಿಡುಗಡೆಗೊಳಿಸಲಾಗಿದ್ದು, ಮತ್ತೆ 40.00 ಲಕ್ಷ ರೂಗಳನ್ನು (ನಲವತ್ತು ಲಕ್ಷ ರೂಗಳು ಮಾತ್ರ) ಪ್ರಸ್ತಾವನೆಯಲ್ಲಿ ನಮೂದಿಸಿರುವ ಕಾರ್ಖಾನೆಗಳ ವ್ಯಾಪ್ತಿಯ ರಸ್ತೆ ಕಾಮಗಾರಿಗಳಿಗೆ ಆದ್ಯತೆ ಮೇರೆಗೆ ಬಿಡುಗಡೆ ಮಾಡುವ ಸಲುವಾಗಿ ಆಯುಕ್ತರು ಕಬ್ಬು ಅಭಿವೃದ್ಧಿ ರವರಿಗೆ ಬಿಡುಗಡೆ ಮಾಡಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಎಫ್‌ಡಿ 866 ವೆಚ್ಚ-1/08 ದಿನಾಂಕ 10-7-08ರಲ್ಲಿ ನೀಡಲಾದ ಸಹಮತಿಯಂತೆ ಹಾಗೂ ಎಫ್.ಡಿ. 01 ಟಿ.ಎಫ್.ಪಿ. 2008 ದಿನಾಂಕ 16-5-08ರಲ್ಲಿ ಸರ್ಕಾರದ ಆಡಳಿತ ಇಲಾಖಾ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಿದ ಅಧಿಕಾರದ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1147

**ಪಿ. ಆನಂದಕುಮಾರ್**

ಪೀಠಾಧಿಕಾರಿ (ಸಕ್ಕರೆ)

ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

**ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ**

**ವಿಷಯ :** ಕರ್ನಾಟಕ ಸರ್ಕಾರ ಸಚಿವಾಲಯದ ನಗರಾಭಿವೃದ್ಧಿ ಇಲಾಖೆಯ ಯೋಜನಾ ಮೇಲ್ವಿಚಾರಣಾ ಕೋಶವನ್ನು ಪೂರಕ ಸಿಬ್ಬಂದಿ ಹುದ್ದೆಗಳೊಂದಿಗೆ ಮುಂದುವರೆಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 21 ಸಸಿವಿ 02, ದಿನಾಂಕ 20–4–2002.
2. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 76 ಸಸಿವಿ 04, ದಿನಾಂಕ 4–3–2005.
3. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 86 ಸಸಿವಿ 06, ದಿನಾಂಕ 18–12–2006.
4. ಜಂಟಿ ನಿರ್ದೇಶಕರು (ಯೋಜನೆ), ನಗರಾಭಿವೃದ್ಧಿ ಇಲಾಖೆ ಇವರ ಅನಧಿಕೃತ ಟಿಪ್ಪಣಿ ಸಂಖ್ಯೆ: ನಅಇ 44 ಪಿಆರ್‌ಜೆ 08, ದಿನಾಂಕ 24–6–2008 ಮತ್ತು ದಿನಾಂಕ 8–7–2008.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ದಿನಾಂಕ 20–4–2002ರ ಸರ್ಕಾರಿ ಆದೇಶದಲ್ಲಿ ನಗರ ಪ್ರದೇಶಗಳ ಮೂಲಭೂತ ಸೌಕರ್ಯಗಳ ಅಭಿವೃದ್ಧಿಗಾಗಿ ಜಾರಿಗೊಳಿಸುತ್ತಿರುವ ಅನೇಕ ಯೋಜನೆಗಳ ಕೆಲಸಕಾರ್ಯಗಳ ಮೇಲ್ವಿಚಾರಣೆ ಮತ್ತು ಸಂಘಟನೆ ನಿರ್ವಹಿಸಲು ಒಂದು ಮೇಲ್ವಿಚಾರಣಾ ಕೋಶವನ್ನು ಕರ್ನಾಟಕ ಸರ್ಕಾರ ಸಚಿವಾಲಯದ ನಗರಾಭಿವೃದ್ಧಿ ಇಲಾಖೆಯಲ್ಲಿ ಕೆಳಕಂಡ ಹುದ್ದೆಗಳೊಂದಿಗೆ ತಾತ್ಕಾಲಿಕವಾಗಿ ಸೃಜಿಸಲಾಗಿದ್ದು, ಸದರಿ ಕೋಶವನ್ನು ಪೂರಕ ಸಿಬ್ಬಂದಿ ಹುದ್ದೆಗಳೊಂದಿಗೆ ಮೇಲೆ (2) ಮತ್ತು (3)ರಲ್ಲಿ ಓದಲಾದ ಸರ್ಕಾರಿ ಆದೇಶಗಳಲ್ಲಿ ಕಾಲಕಾಲಕ್ಕೆ ಮುಂದುವರಿಸುತ್ತಾ ಒದಲಾಗಿತ್ತು.

| | | |
|---|---|---|
| 1) | ನಿರ್ದೇಶಕರು, ಯೋಜನಾ ಕೋಶ ಮತ್ತು ಪದನಿಮಿತ್ತ ಹೆಚ್ಚುವರಿ ಸಹ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ | 1 ಹುದ್ದೆ |
| 2) | ಸರ್ಕಾರದ ಅಧೀನ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ | 1 ಹುದ್ದೆ |
| 3) | ಶಾಖಾಧಿಕಾರಿ | 1 ಹುದ್ದೆ |
| 4) | ಹಿರಿಯ ಸಹಾಯಕರು | 1 ಹುದ್ದೆ |
| 5) | ಸಹಾಯಕರು | 2 ಹುದ್ದೆಗಳು |
| 6) | ಕಿರಿಯ ಸಹಾಯಕರು | 2 ಹುದ್ದೆಗಳು |
| 7) | ಶೀಘ್ರಲಿಪಿಗಾರರು | 2 ಹುದ್ದೆಗಳು |
| 8) | ಬೆರಳಚ್ಚುಗಾರರು | 1 ಹುದ್ದೆ |
| | **ಒಟ್ಟು** | **11 ಹುದ್ದೆಗಳು** |

ಮೇಲ್ಕಂಡ ಹುದ್ದೆಗಳ ಮುಂದುವರಿಕೆಯು ದಿನಾಂಕ 31–12–2007ಕ್ಕೆ ಮುಕ್ತಾಯಗೊಂಡಿದ್ದರಿಂದ, ಯೋಜನಾ ಮೇಲ್ವಿಚಾರಣಾ ಕೋಶವನ್ನು ನಿರ್ದೇಶಕರು ಮತ್ತು ಪದನಿಮಿತ್ತ ಸರ್ಕಾರದ ಸಹ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ ಈ ಹುದ್ದೆಗೆ ವಹಿಸಿದ ಕರ್ತವ್ಯವನ್ನು ಸದರಿ ಇಲಾಖೆಯ ಜಂಟಿ ಕಾರ್ಯದರ್ಶಿ–2 ಇವರಿಗೆ ವಹಿಸಲಾಗಿರುವುದರಿಂದ ನಿರ್ದೇಶಕರು ಮತ್ತು ಪದನಿಮಿತ್ತ ಸಹ ಕಾರ್ಯದರ್ಶಿ ಹುದ್ದೆಯನ್ನು ಹೊರತುಪಡಿಸಿ ಇನ್ನುಳಿದ 10 ಹುದ್ದೆಗಳನ್ನು ದಿನಾಂಕ 1–1–2008 ರಿಂದ ಒಂದು ವರ್ಷದ ಅವಧಿಗೆ ತಾತ್ಕಾಲಿಕವಾಗಿ ಮುಂದುವರಿಸುವಂತೆ ಮೇಲೆ (4)ರಲ್ಲಿ ಓದಲಾದ ದಿನಾಂಕ 3–7–2008ರ ಅನಧಿಕೃತ ಟಿಪ್ಪಣಿಯಲ್ಲಿ ಸದರಿ ಇಲಾಖೆಯು ಕೋರಿದೆ. ಅದರಂತೆ ಪರಿಶೀಲಿಸಿದ ಸರ್ಕಾರವು ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 571 ಸಅಸೇ 2008, ಬೆಂಗಳೂರು, ದಿನಾಂಕ: 2ನೇ ಆಗಸ್ಟ್ 2008.**

ಕರ್ನಾಟಕ ಸರ್ಕಾರ ಸಚಿವಾಲಯದ ನಗರಾಭಿವೃದ್ಧಿ ಇಲಾಖೆಯ ಯೋಜನಾ ಮೇಲ್ವಿಚಾರಣಾ ಕೋಶವನ್ನು ಈ ಕೆಳಕಂಡ ಹುದ್ದೆಗಳೊಂದಿಗೆ ದಿನಾಂಕ 1–1–2008ರಿಂದ ಜಾರಿಗೆ ಬರುವಂತೆ ಒಂದು ವರ್ಷದ ಅವಧಿಗೆ ತಾತ್ಕಾಲಿಕವಾಗಿ ಮುಂದುವರಿಸಿ ಆದೇಶಿಸಿದೆ.

| | | |
|---|---|---|
| 1) | ಸರ್ಕಾರದ ಅಧೀನ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ | 1 ಹುದ್ದೆ |
| 2) | ಶಾಖಾಧಿಕಾರಿ | 1 ಹುದ್ದೆ |
| 3) | ಹಿರಿಯ ಸಹಾಯಕರು | 1 ಹುದ್ದೆ |
| 4) | ಸಹಾಯಕರು | 2 ಹುದ್ದೆಗಳು |
| 5) | ಕಿರಿಯ ಸಹಾಯಕರು | 2 ಹುದ್ದೆಗಳು |

| | | |
|---|---|---|
| 6) | ಶೀಘ್ರಲಿಪಿಗಾರರು | 2 ಹುದ್ದೆಗಳು |
| 7) | ಬೆರಳಚ್ಚುಗಾರರು | 1 ಹುದ್ದೆ |
| | **ಒಟ್ಟು** | **10 ಹುದ್ದೆಗಳು** |

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ 10–7–1996ರಲ್ಲಿ ಆರ್ಥಿಕ ಇಲಾಖೆ ಸಹಮತಿ ನೀಡಿದೆ ಎಂದು ಪರಿಭಾವಿಸಿ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1143

**ಎಂ.ಎಸ್. ಶಿವರಾಮ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಆಸು ಇಲಾಖೆ (ಸೇವೆಗಳು–3)

## ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ

**ವಿಷಯ :** ಸರ್ಕಾರಿ ರೇಷ್ಮೆ ಕೃಷಿ ಕ್ಷೇತ್ರ, ಕೂಡಿಗೆಯಲ್ಲಿರುವ ಇಲಾಖಾ ಕಟ್ಟಡಗಳನ್ನು ಸೈನಿಕ ಶಾಲೆಯ ಸಿಬ್ಬಂದಿಯವರಿಗೆ ತಾತ್ಕಾಲಿಕವಾಗಿ ಬಾಡಿಗೆ ಆಧಾರದ ಮೇಲೆ ನೀಡುವ ಬಗ್ಗೆ.

**ಓದಲಾಗಿದೆ:** ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ನಿರ್ದೇಶಕರು ಇವರ ಪತ್ರ ಸಂಖ್ಯೆ: ಸರೇಕೃಕ್ಷೇ/ಕೂಡಿಗೆ/ಸೈ–ಶಾ/ಕಟ್ಟಡ/1/07–08, ದಿ: 2–11–2007.

**ಪ್ರಸ್ತಾವನೆ :**

ಮೇಲೆ ಓದಲಾದ ಪತ್ರದಲ್ಲಿ ಉಪನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ, ಮಡಿಕೇರಿ ಇವರು ಸೋಮವಾರಪೇಟೆ ತಾಲ್ಲೂಕಿನ ಕೂಡಿಗೆಯಲ್ಲಿ ಸೈನಿಕ ಶಾಲೆ ಪ್ರಾರಂಭಿಸುವುದಕ್ಕಾಗಿ ಸ್ವಂತ ಕಟ್ಟಡ ನಿರ್ಮಾಣವಾಗುವವರೆಗೆ ಕೂಡಿಗೆ ಸಮುಚ್ಚಯದಲ್ಲಿ ಖಾಲಿ ಇರುವ ಕಟ್ಟಡಗಳನ್ನು ತಾತ್ಕಾಲಿಕವಾಗಿ ಸೈನಿಕ ಶಾಲೆ ಪ್ರಾರಂಭಿಸಲು ಬಿಟ್ಟುಕೊಡುವಂತೆ ಕೋರಿರುವುದಾಗಿ ಸದರಿ ಸರ್ಕಾರಿ ರೇಷ್ಮೆ ಕೃಷಿ ಕ್ಷೇತ್ರದಲ್ಲಿ, 24 ವಸತಿ ಗೃಹಗಳಿದ್ದು, ಅವುಗಳಲ್ಲಿ 10 ವಸತಿ ಗೃಹಗಳು ಖಾಲಿ ಇದ್ದು, ಖಾಲಿ ಇರುವ 10 ವಸತಿ ಗೃಹಗಳನ್ನು ಲೋಕೋಪಯೋಗಿ ಇಲಾಖೆಯು ನಿಗದಿಪಡಿಸುವ ಬಾಡಿಗೆ ಆಧಾರದ ಮೇಲೆ ತಾತ್ಕಾಲಿಕವಾಗಿ ಸೈನಿಕ ಶಾಲೆಗೆ ನೀಡಬಹುದಾಗಿದೆ ಎಂದು ತಿಳಿಸಿ, ಈ ಬಗ್ಗೆ ಸೂಕ್ತ ಆದೇಶ ನೀಡುವಂತೆ ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಕೋರಿರುತ್ತಾರೆ.

ವಿಷಯವನ್ನು ಪರಿಶೀಲಿಸಲಾಗಿದ್ದು, ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಕೋರಿರುವಂತೆ ಖಾಲಿ ಇರುವ ರೇಷ್ಮೆ ಕೃಷಿ ಕ್ಷೇತ್ರ, ಕೂಡಿಗಿಯ ವಸತಿ ಗೃಹಗಳನ್ನು ಸೈನಿಕ ಶಾಲೆಗೆ ನೀಡಲು ತೀರ್ಮಾನಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ವಾಕೈ 64 ರೇಯೋವಿ 2007, ಬೆಂಗಳೂರು, ದಿನಾಂಕ: 30ನೇ ಜುಲೈ 2008.**

ಸರ್ಕಾರಿ ರೇಷ್ಮೆ ಕೃಷಿ ಕ್ಷೇತ್ರ, ಕೂಡಿಗಿಯಲ್ಲಿ ಖಾಲಿ ಇರುವ 10 ವಸತಿ ಗೃಹಗಳನ್ನು ಲೋಕೋಪಯೋಗಿ ಇಲಾಖೆಯು ನಿಗದಿಪಡಿಸುವ ಸಾಮಾನ್ಯ ಬಾಡಿಗೆ ಆಧಾರದ ಮೇಲೆ ಸರ್ಕಾರಿ ಪತ್ರ ಸಂಖ್ಯೆ ವಾಕೈ 27 ರೇಯೋವಿ 2007, ದಿನಾಂಕ 24–5–2008ರಲ್ಲಿ ಸೂಚಿಸಿರುವ ಮಾರ್ಗಸೂಚಿ, ಕರಾರು ಒಪ್ಪಂದ, ಷರತ್ತು ಮತ್ತು ನಿಬಂಧನೆಗಳನ್ವಯ ತಾತ್ಕಾಲಿಕವಾಗಿ ಸಾರ್ವಜನಿಕ ಶಿಕ್ಷಣ ಇಲಾಖೆಗೆ ನೀಡುವುದಕ್ಕೆ ಮಂಜೂರಾತಿ ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1149

**ಭಾರತಿ ಆರ್. ನಾಯಕ್**
ಪೀಠಾಧಿಕಾರಿ (ರೇಷ್ಮೆ)
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ವಿಷಯ :** ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯಡಿ ದುಡಿಯುವ ಕೂಲಿಕಾರರಿಗೆ ಕನಿಷ್ಠ ಕೂಲಿದರವನ್ನು ಪರಿಷ್ಕರಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶದ ಸಂಖ್ಯೆ ಗ್ರಾಅಪ 21 ಉಖಾಯೋ 2006 ಬೆಂಗಳೂರಿ, ದಿನಾಂಕ 30–3–2007.
2. ಕಾರ್ಮಿಕ ಆಯುಕ್ತರು, ಕಾರ್ಮಿಕ ಇಲಾಖೆ, ಬೆಂಗಳೂರು, ಇವರ ಪತ್ರದ ಸಂಖ್ಯೆ: ಎಂಡಬ್ಲ್ಯೂಎ/ಸಿಆರ್–62/2007–08, ದಿನಾಂಕ 20–3–2008.

**ಪ್ರಸ್ತಾವನೆ :**

2007–08ನೇ ಸಾಲಿಗೆ ಮಾರ್ಪಾಡಿನ ತುಟ್ಟಿ ಭತ್ಯೆಯನ್ನು ಪರಿಗಣಿಸಿ, ಕಾರ್ಮಿಕ ಇಲಾಖೆ, ಬೆಂಗಳೂರು, ಇವರು ನಿಗದಿ ಪಡಿಸಲಾಗಿದ್ದ ಗ್ರಾಹಕ ಬೆಲೆ ಸೂಚ್ಯಂಕಗಳ ಆಧಾರದ ಮೇಲೆ, ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆ, ಸಂಪೂರ್ಣ ಗ್ರಾಮೀಣ ರೋಜ್‌ಗಾರ್ ಯೋಜನೆ ಮತ್ತು ಸಂಪೂರ್ಣ ಗ್ರಾಮೀಣ ರೋಜ್‌ಗಾರ್ ಯೋಜನೆ (ವಿಶೇಷ ಘಟಕ) ಈ ಯೋಜನೆಗಳಡಿ ಕೆಲಸ ಮಾಡುವ ಕೂಲಿಕಾರ್ಮಿಕರಿಗೆ ದಿನಗೂಲಿಯ ದರವನ್ನು ದಿನಾಂಕ 1–4–2007 ರಿಂದ ಜಾರಿಗೆ ಬರುವಂತೆ ರೂ. 74–00ಕ್ಕೆ ನಿಗದಿ ಪಡಿಸಿ ಉಲ್ಲೇಖ (1)ರಂತೆ ಆದೇಶ ಹೊರಡಿಸಲಾಗಿದೆ.

ಈಗ 2008–09ನೇ ಸಾಲಿನಲ್ಲಿ ಸಂಪೂರ್ಣ ಗ್ರಾಮೀಣ ರೋಜ್‌ಗಾರ್ ಯೋಜನೆಯ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯೊಂದಿಗೆ ವಿಲೀನಗೊಂಡಿರುತ್ತದೆಯಾದ್ದರಿಂದ ಕೂಲಿಯ ದರವನ್ನು ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಗೆ ಮಾತ್ರ ನಿಗದಿಪಡಿಸಬೇಕಾಗಿದೆ.

ಈಗ ಕಾರ್ಮಿಕ ಇಲಾಖೆಯವರು ಉಲ್ಲೇಖ (2)ರ ಪತ್ರದಲ್ಲಿ ಸೂಚಿಸಿರುವಂತೆ, ಪ್ರಚಲಿತ ವರ್ಷದ ಗ್ರಾಹಕ ಬೆಲೆಯ ಸೂಚ್ಯಂಕಗಳ ಆಧಾರದ ಮೇಲೆ ಮಾರ್ಪಾಡಿನ ತುಟ್ಟಿ ಭತ್ಯೆಯನ್ನು ಪರಿಗಣಿಸಿ, ಅಕುಶಲ ಕಾರ್ಮಿಕರ ಕನಿಷ್ಠ ದಿನಗೂಲಿಯನ್ನು ರೂ. 74–00 ರಿಂದ ರೂ. 82ಕ್ಕೆ ಪರಿಷ್ಕರಿಸಿ, ದಿನಾಂಕ 1–8–2008 ರಿಂದ ಅನ್ವಯವಾಗುವಂತೆ ಜಾರಿಗೊಳಿಸಲು ತೀರ್ಮಾನಿಸಲಾಗಿದೆ. ಆದುದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ 21 ಉಖಾಯೋ 2006 ಬೆಂಗಳೂರು, ದಿನಾಂಕ: 29ನೇ ಜುಲೈ 2008.**

ಪ್ರಸ್ತಾವನೆಯಲ್ಲಿ ವಿವರಿಸಿದಂತೆ ಗ್ರಾಮೀಣ ಪ್ರದೇಶಗಳಲ್ಲಿ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯಡಿ ದುಡಿಯುವ ಅಕುಶಲ ಕಾರ್ಮಿಕರಿಗೆ ಪಾವತಿಸುತ್ತಿರುವ ಕೂಲಿಯ ಕನಿಷ್ಠ ದರವನ್ನು ದಿನಕ್ಕೆ ರೂ. 74–00 ಗಳಿಂದ ರೂ. 82–00 (ರೂ ಎಂಬತ್ತೆರಡು ಮಾತ್ರ)ಗಳಿಗೆ ಪರಿಷ್ಕರಿಸಿ ನಿಗದಿಪಡಿಸಿದೆ. ಈ ಆದೇಶವು ದಿನಾಂಕ 1–8–2008 ರಿಂದ ಅನ್ವಯವಾಗುವಂತೆ ಜಾರಿಗೆ ಬರತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1151

**ಸಿ.ಎಂ. ಶಿರೋಳ್**
ನಿರ್ದೇಶಕರು,
ಯೋಜನಾ, ಸಮನ್ವಯ ಮತ್ತು ಮೇಲ್ವಿಚಾರಣಾ ಘಟಕ,
ಹಾಗೂ ಪದನಿಮಿತ್ತ ಸರ್ಕಾರದ ಅಪರ ಕಾರ್ಯದರ್ಶಿ,
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ

**ವಿಷಯ :** ಶಿವಮೊಗ್ಗ ಜಿಲ್ಲಾ ಪಂಚಾಯತ್ ಹಾಗೂ ಸ್ವಾಮಿ ವಿವೇಕಾನಂದ ವಿದ್ಯಾ ಸಂಸ್ಥೆ (ರಿ) ಟ್ರಸ್ಟ್, ಶಿವಮೊಗ್ಗ ರಸ್ತೆ, ಶಿಕಾರಿಪುರ ಇವರ ಸಹಯೋಗದೊಂದಿಗೆ ಸಿದ್ಧ ಉಡುಪು ತರಬೇತಿ ಮತ್ತು ಉತ್ಪಾದನಾ ಕೇಂದ್ರವನ್ನು ಸ್ಥಾಪಿಸುವ ಕುರಿತು.

**ಓದಲಾಗಿದೆ:** ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್, ಶಿವಮೊಗ್ಗ ರವರ ಪತ್ರದ ಸಂ. ಜಿಪಂಶಿ/ಎಸ್‌ಜಿಎಸ್‌ವೈ/ವಿವ 41/07–08, ದಿನಾಂಕ 5–6–2008.

**ಪ್ರಸ್ತಾವನೆ :**

ಕೃಷಿ ನಂತರ ಹೆಚ್ಚಿನ ಉದ್ಯೋಗ ಒದಗಿಸುವ ಕ್ಷೇತ್ರ ಜವಳಿ ವಲಯವಾಗಿರುತ್ತದೆ. ಸಿದ್ಧ ಉಡುಪು ಕೈಗಾರಿಕೆಗಳು ಬೆಂಗಳೂರಿನಲ್ಲಿ ಮಾತ್ರ ಕೇಂದ್ರೀಕೃತವಾಗಿದ್ದು, ಉಳಿದ ಜಿಲ್ಲೆಗಳಲ್ಲಿ ಸಿದ್ಧ ಉಡುಪು ತಯಾರಿಕೆಯಲ್ಲಿ ನುರಿತ ಕೆಲಸಗಾರರು ಸಿಗದ ಪ್ರಯುಕ್ತ ಸಿದ್ಧ ಉಡುಪು ಘಟಕಗಳು ವಿವಿಧ ಜಿಲ್ಲೆಗಳಲ್ಲಿ ಸ್ಥಾಪನೆಯಾಗುತ್ತಿಲ್ಲ. ವಿವಿಧ ಜಿಲ್ಲೆಗಳಲ್ಲಿ ಸಿದ್ಧ ಉಡುಪು ಘಟಕಕ್ಕೆ ಅವಶ್ಯವಿರುವ ನುರಿತ ಕೆಲಸಗಾರರನ್ನು ತಯಾರು ಮಾಡುವುದು ಹಾಗೂ ಜಿಲ್ಲೆಯಲ್ಲಿ ಸಿದ್ಧ ಉಡುಪು ಉದ್ಯಮಕ್ಕೆ ಬೇಡಿಕೆ ಸೃಷ್ಟಿಸುವುದು ಅವಶ್ಯವಿರುತ್ತದೆ ಹಾಗೂ ಎಸ್‌ಜಿಎಸ್‌ವೈ ಯೋಜನೆಯಲ್ಲಿ ಸ್ವ ಉದ್ಯೋಗ ಸೃಷ್ಟಿಸುವುದು ಅವಶ್ಯವಿರುತ್ತದೆ. ಸಾರ್ವಜನಿಕ ಕ್ಷೇತ್ರದಲ್ಲಿ ನಿಸ್ವಾರ್ಥ ಸೇವೆ ಸಲ್ಲಿಸುವ ಸ್ವಯಂ ಸೇವಾ ಸಂಸ್ಥೆ ಜೊತೆ ತರಬೇತಿಯು ಪ್ರಾರಂಭಿಸುವ ಉದ್ದೇಶ ರಾಜ್ಯ ಸರ್ಕಾರ ಹೊಂದಿರುತ್ತದೆ. ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್, ಶಿವಮೊಗ್ಗ ಇವರು ಸ್ಥಳ ಪರಿಶೀಲನೆ ಮಾಡಿ ಸ್ವಾಮಿ ವಿವೇಕಾನಂದ ವಿದ್ಯಾ ಸಂಸ್ಥೆ (ರಿ) ಟ್ರಸ್ಟ್, ಶಿವಮೊಗ್ಗ ರಸ್ತೆ, ಶಿಕಾರಿಪುರ ಈ ಸಂಸ್ಥೆಯು ನಂಬಿಕೆಗೆ ಅರ್ಹವಾದ ನಿಸ್ವಾರ್ಥ ಸೇವೆ ಬಗ್ಗೆ ಹಾಗೂ ತರಬೇತಿ ಮತ್ತು ಉತ್ಪಾದನಾ ಕೇಂದ್ರವನ್ನು ಸ್ಥಾಪಿಸುವ ಬಗ್ಗೆ ಶಿಫಾರಸ್ಸು ಮಾಡಿರುತ್ತಾರೆ. ಈ ಸಂಸ್ಥೆಗಳಲ್ಲಿ Sewing Machine Operator Course, ಪ್ರಾರಂಭಿಸುವ ಬಗ್ಗೆ ದಿನಾಂಕ 15–6–2007ರಂದು ತಾಂತ್ರಿಕ ಸಮಿತಿಯು ತರಬೇತಿ ಮತ್ತು ಉತ್ಪಾದನಾ ಕೇಂದ್ರಕ್ಕೆ ಅವಶ್ಯವಿರುವ ಯಂತ್ರೋಪಕರಣ ಹಾಗೂ ಇತರೆ accessories ಗಳ ಬಗ್ಗೆ ನಿಗದಿಪಡಿಸಿ ಸರ್ಕಾರಕ್ಕೆ ವರದಿ ಸಲ್ಲಿಸಿರುತ್ತದೆ. ಶಿವಮೊಗ್ಗ ಜಿಲ್ಲಾ ಪಂಚಾಯತ್ ಹಾಗೂ

ಸ್ವಾಮಿ ವಿವೇಕಾನಂದ ವಿದ್ಯಾ ಸಂಸ್ಥೆ (ರಿ) ಟ್ರಸ್ಟ್, ಶಿವಮೊಗ್ಗ ರಸ್ತೆ, ಶಿಕಾರಿಪುರ ಇವರ ಸಹಯೋಗದೊಂದಿಗೆ ಸಿದ್ಧ ಉಡುಪು ತರಬೇತಿ ಮತ್ತು ಉತ್ಪಾದನಾ ಕೇಂದ್ರವನ್ನು ಸ್ಥಾಪಿಸಬೇಕಾಗಿದೆ.

ಆದುದರಿಂದ, ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ 3 ಎಸ್‌ಜಿವೈ 2008, ಬೆಂಗಳೂರು, ದಿನಾಂಕ: 26ನೇ ಜುಲೈ 2008.**

ರಾಜ್ಯ ಸರ್ಕಾರ ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ, ಶಿವಮೊಗ್ಗ ಜಿಲ್ಲಾ ಪಂಚಾಯತ್ ಹಾಗೂ ಸ್ವಾಮಿ ವಿವೇಕಾನಂದ ವಿದ್ಯಾ ಸಂಸ್ಥೆ (ರಿ) ಟ್ರಸ್ಟ್, ಶಿವಮೊಗ್ಗ ರಸ್ತೆ, ಶಿಕಾರಿಪುರ ಇವರ ಸಹಯೋಗದೊಂದಿಗೆ ಸಿದ್ಧ ಉಡುಪು ತರಬೇತಿ ಮತ್ತು ಉತ್ಪಾದನಾ ಕೇಂದ್ರವನ್ನು ಈ ಕೆಳಗೆ ಕಾಣಿಸಿದ ಷರತ್ತುಗಳೊಂದಿಗೆ ಪ್ರಾರಂಭಿಸಲು ಮಂಜೂರಾತಿ ನೀಡಲಾಗಿದೆ.

| ಕ್ರ. ಸಂ. | ಜಿಲ್ಲೆಯ ಹೆಸರು | ತರಬೇತಿ ಕೇಂದ್ರವನ್ನು ಪ್ರಾರಂಭಿಸುವ ಸ್ಥಳ | ಯಂತ್ರೋಪಕರಣಕ್ಕೆ ಅನುದಾನ (ರೂ. ಲಕ್ಷಗಳಲ್ಲಿ) | ಆವರ್ತಕ ವೆಚ್ಚ |
|---|---|---|---|---|
| 1 | ಶಿವಮೊಗ್ಗ | ಶಿವಮೊಗ್ಗ ಜಿಲ್ಲಾ ಪಂಚಾಯತ್ ಹಾಗೂ ಸ್ವಾಮಿ ವಿವೇಕಾನಂದ ವಿದ್ಯಾ ಸಂಸ್ಥೆ (ರಿ) ಟ್ರಸ್ಟ್, ಶಿವಮೊಗ್ಗ ರಸ್ತೆ, ಶಿಕಾರಿಪುರ | 15.50 | ಗರಿಷ್ಠ ರೂ. 4.00 ಲಕ್ಷವನ್ನು ಎಸ್‌ಜಿಎಸ್‌ವೈ ತರಬೇತಿ ಅನುದಾನದಿಂದ ಭರಿಸುವುದು. |

**ಷರತ್ತುಗಳು:**

1. ಸಿದ್ಧ ಉಡುಪು ತರಬೇತಿ ಮತ್ತು ಉತ್ಪಾದನಾ ಕೇಂದ್ರಕ್ಕೆ ಭೂಮಿ ಮತ್ತು ಕಟ್ಟಡ ಅನುದಾನ ನೀಡಲು ಅವಕಾಶವಿರುವುದಿಲ್ಲ.
2. ಸಿದ್ಧ ಉಡುಪು ಮತ್ತು ತರಬೇತಿ ಉತ್ಪಾದನಾ ಕೇಂದ್ರವನ್ನು ಕನಿಷ್ಠ 10 ವರ್ಷ ಸ್ವಯಂ ಸೇವಾ ಸಂಸ್ಥೆಗಳು ಕಡ್ಡಾಯವಾಗಿ ನಡೆಸಬೇಕು.
3. ಸ್ವಯಂ ಸೇವಾ ಸಂಸ್ಥೆಯ ಸ್ವಂತ ಕಟ್ಟಡಕ್ಕೆ ಬಾಡಿಗೆಯನ್ನು ಹಾಕತಕ್ಕದ್ದಲ್ಲ.
4. ಪ್ರತ್ಯೇಕವಾಗಿ ಪುರುಷರಿಗೆ ಮತ್ತು ಮಹಿಳೆಯರಿಗೆ ಶೌಚಾಲಯ ಮತ್ತು ನೀರಿನ ವ್ಯವಸ್ಥೆ ಮಾಡುವುದು.
5. ತರಬೇತಿ ಕೇಂದ್ರಕ್ಕೆ 4000 ಚದರ ಅಡಿ x 20 ಕೆವಿಎ ವಿದ್ಯುಚ್ಛಕ್ತಿ ನೀರಿನ ವ್ಯವಸ್ಥೆ ಮತ್ತು ಶೌಚಾಲಯ ಸೌಲಭ್ಯ ಒದಗಿಸುವುದು.
6. ಎಸ್‌ಜಿಎಸ್‌ವೈ ಯೋಜನೆಯ ಮೂಲಭೂತ ಸೌಕರ್ಯದಡಿ ಯಂತ್ರೋಪಕರಣವನ್ನು ನೀಡಲಾಗುತ್ತಿದ್ದು ಸಂಸ್ಥೆಯವರು ಅನಿವಾರ್ಯ ಕಾರಣದಿಂದ ತರಬೇತಿ ಕೇಂದ್ರವನ್ನು ಸ್ಥಗಿತಗೊಳಿಸಿದರೆ ಯಂತ್ರೋಪಕರಣವನ್ನು ಬೇರೆ ಕೇಂದ್ರಕ್ಕೆ ವರ್ಗಾಯಿಸುವ ಅಥವಾ ಸದರಿ ಸಂಸ್ಥೆಯ ಕಟ್ಟಡದಲ್ಲಿಯೇ ಬಾಡಿಗೆಯ ಆಧಾರದ ಮೇಲೆ ನಡೆಸುವ ಅಧಿಕಾರ ಜಿಲ್ಲಾ ಪಂಚಾಯತಿಗಿರುತ್ತದೆ. ಇದರ ಬಗ್ಗೆ ಜಿಲ್ಲಾ ಪಂಚಾಯತ್ ಮತ್ತು ಸ್ವಯಂ ಸೇವಾ ಸಂಸ್ಥೆಗಳು ಒಡಂಬಡಿಕೆ ಮಾಡಿಕೊಳ್ಳತಕ್ಕದ್ದು.
7. ತರಬೇತಿ ಅವಧಿಯಲ್ಲಿ ಎಸ್‌ಜಿಎಸ್‌ವೈ ಯೋಜನೆಯಿಂದ ಶಿಷ್ಯವೇತನ ನೀಡಲು ಅವಕಾಶವಿರುವುದಿಲ್ಲ.
8. ಈ ತರಬೇತಿ ಮತ್ತು ಉತ್ಪಾದನಾ ಕೇಂದ್ರವು ಅಪೆರಲ್ ಟ್ರೈನಿಂಗ್ ಮತ್ತು ಡಿಸೈನ್ ಸೆಂಟರ್ (ATDC), ಬೆಂಗಳೂರು ಇವರು ಅಳವಡಿಸಿದ 1) ಪಠ್ಯಕ್ರಮ 2) ಯಂತ್ರೋಪಕರಣ 3) ತರಬೇತಿಯ ಗುಣಮಟ್ಟವನ್ನು ಬೆಂಚ್ ಮಾರ್ಕ್ ಆಗಿ ಇಟ್ಟುಕೊಂಡು ಈ ಮಾದರಿಯಲ್ಲಿ ತರಬೇತಿ ಕೇಂದ್ರವನ್ನು ಸ್ಥಾಪಿಸತಕ್ಕದ್ದು.
9. ಕೇಂದ್ರ ನಡೆಸಲು ವರ್ಷಕ್ಕೆ ನೈಜವಾಗಿ ತಗಲುವ ಆವರ್ತಕ ವೆಚ್ಚ (Recurring Expenditure) ಶೇಕಡ 50ರಷ್ಟು ಜಿಲ್ಲಾ ಪಂಚಾಯತ್ ಶಿವಮೊಗ್ಗದಿಂದ ಉಳಿದ ಶೇಕಡ 50ರಷ್ಟು ವೆಚ್ಚವನ್ನು ತರಬೇತಿ ಪಡೆಯುವ ಅಭ್ಯರ್ಥಿಗಳಿಂದ ಶುಲ್ಕವಾಗಿ ವಸೂಲಿ ಮಾಡುವ ಮೂಲಕ ಸಂಸ್ಥೆ ಭರಿಸುವುದು. 3 ವರ್ಷಗದವರೆಗೆ ಈ ವ್ಯವಸ್ಥೆ ಇರುತ್ತದೆ. ನಂತರದ ಸ್ವಯಂ ಸೇವಾ ಸಂಸ್ಥೆಯೇ ಪೂರ್ತಿಯಾಗಿ ಆವರ್ತಕ ವೆಚ್ಚವನ್ನು ಭರಿಸತಕ್ಕದ್ದು.
10. ಸದರಿ ತರಬೇತಿ ಮತ್ತು ಉತ್ಪಾದನಾ ಕೇಂದ್ರದಲ್ಲಿ ಡಾ: ಅಂಬೇಡ್ಕರ್ ಅಭಿವೃದ್ಧಿ ನಿಗಮ, ಡಿ. ದೇವರಾಜ ಅರಸ್ ಅಭಿವೃದ್ಧಿ ನಿಗಮ, ಕೈಮಗ್ಗ ಮತ್ತು ಜವಳಿ ಇಲಾಖೆ, ಸ್ವರ್ಣ ಜಯಂತಿ ಗ್ರಾಮ ಸ್ವರೋಜ್‌ಗಾರ್ ಯೋಜನೆಯ ಫಲಾನುಭವಿಗಳು ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆಯ ಫಲಾನುಭವಿಗಳು ಹಾಗೂ ಇತರೆ ಇಲಾಖೆಯ ಯೋಜನೆಗಳಲ್ಲಿ ಆಯ್ಕೆಯಾದ ಫಲಾನುಭವಿಗಳಿಗೆ ತರಬೇತಿ ನೀಡುವುದು.

ತರಬೇತಿ ಅವಧಿಯನ್ನು ಹಾಗೂ ತರಬೇತಿಯ course fee ಯನ್ನು (ಎಸ್‌ಜಿಎಸ್‌ವೈ ಹೊರತುಪಡಿಸಿ) ಮುಖ್ಯ ಕಾರ್ಯನಿರ್ವಹಣಾಧಿಕಾರಿ ಜಿಲ್ಲಾ ಪಂಚಾಯತ್ ಹಾಗೂ ಸ್ವಯಂ ಸೇವಾ ಸಂಸ್ಥೆಗಳ ಜೊತೆ ಸೇರಿ ನಿರ್ಧರಿಸುವುದು.

11. ಯಂತ್ರೋಪಕರಣ ಖರೀದಿಗೆ ಗರಿಷ್ಠ ರೂ. 15.50 ಲಕ್ಷ ನಿಗದಿಪಡಿಸಿದ್ದು ಅದಕ್ಕಿಂತ ಕಡಿಮೆ ನೈಜ ವೆಚ್ಚವಾಗಿದ್ದರೆ, ನೈಜ ವೆಚ್ಚವನ್ನು ಮಾತ್ರ ಪಾವತಿಸುವುದು.
12. ಯಂತ್ರೋಪಕರಣ ಖರೀದಿಯಲ್ಲಿ ಪಾರದರ್ಶಕ ಕಾಯಿದೆ ನಿಯಮಗಳನ್ನು ಕಡ್ಡಾಯವಾಗಿ ಪಾಲಿಸುವುದು.
13. ಸಂಸ್ಥೆಗೆ ಬೇಕಾದ ಸಿಬ್ಬಂದಿಯನ್ನು ತಾಂತ್ರಿಕ ನೈಪುಣ್ಯತೆಯ ಆಧಾರದ ಮೇಲೆ ನೇಮಿಸುವ ಜವಾಬ್ದಾರಿ ಜಿಲ್ಲಾ ಪಂಚಾಯತ್ ಮತ್ತು ಸ್ವಯಂ ಸೇವಾ ಸಂಸ್ಥೆಯದಾಗಿರುತ್ತದೆ.
14. ಪ್ರತಿ ತಿಂಗಳು ಕನಿಷ್ಠ 50 ಅಭ್ಯರ್ಥಿಗಳಿಗೆ ತರಬೇತಿ ನೀಡುವುದು.
15. ಜಿಲ್ಲಾ ಮಟ್ಟದಲ್ಲಿ ಉಸ್ತುವಾರಿ ಸಮಿತಿಯನ್ನು ಮುಖ್ಯ ಕಾರ್ಯನಿರ್ವಹಣಾಧಿಕಾರಿ ಇವರ ಅಧ್ಯಕ್ಷತೆಯಲ್ಲಿ ರಚನೆ ಮಾಡಲಾಗಿದೆ. ಈ ಸಮಿತಿಯು ಪ್ರತಿ ತಿಂಗಳು ಸಭೆ ನಡೆಸುವುದು.
16. ಯಂತ್ರೋಪಕರಣಗಳ ವೆಚ್ಚವನ್ನು ಎಸ್‌ಜಿಎಸ್‌ವೈ ಯೋಜನೆಯ ಮೂಲಭೂತ ಸೌಕರ್ಯ ನಿಧಿಯಿಂದ ಭರಿಸುವುದು. ಈ ಯಂತ್ರೋಪಕರಣಗಳು ಜಿಲ್ಲಾ ಪಂಚಾಯತಿ ಆಸ್ತಿಯಾಗಿದ್ದು ರಿಜಿಸ್ಟರ್‌ನಲ್ಲಿ ದಾಖಲೆ ಮಾಡುವುದು.
17. ಕೇಂದ್ರ ಪ್ರಾರಂಭ ಆದ ನಂತರ ಶಿವಮೊಗ್ಗ ಜಿಲ್ಲಾ ಪಂಚಾಯತ್ ಹಾಗೂ ಸ್ವಾಮಿ ವಿವೇಕಾನಂದ ವಿದ್ಯಾ ಸಂಸ್ಥೆ (ರಿ) ಟ್ರಸ್ಟ್ ಸಹಯೋಗದೊಂದಿಗೆ ಸ್ಥಾಪಿಸಲ್ಪಟ್ಟ ತರಬೇತಿ ಮತ್ತು ಉತ್ಪಾದನಾ ಕೇಂದ್ರವೆಂದು ಬೋರ್ಡ್ ಹಾಕುವುದು".
18. ತರಬೇತಿ ಕೇಂದ್ರವನ್ನು ಪ್ರಾರಂಭಿಸಲು ಅವಶ್ಯವಿರುವ ಎಲ್ಲಾ ಸಿದ್ಧತೆಗಳನ್ನು ಆಗಸ್ಟ್ 2008ರ ಅಂತ್ಯದೊಳಗೆ ಪ್ರಾರಂಭಿಸಲು ಎಲ್ಲ ಕ್ರಮ ಕೈಗೊಳ್ಳುವುದು.
19. ತರಬೇತಿ ಕೇಂದ್ರವನ್ನು ಪ್ರಾರಂಭಿಸಲು ಅಂದಾಜು ವೆಚ್ಚ ಅಗತ್ಯವಿರುವ ಯಂತ್ರೋಪಕರಣಗಳು, ಪೀಠೋಪಕರಣಗಳು, ಸಲಕರಣೆಗಳು ಮತ್ತು ವಿದ್ಯುತ್ ಸಲಕರಣೆಗಳ ಬಗ್ಗೆ ವಿವರಗಳನ್ನು ಅನುಬಂಧ–ಎ ರಲ್ಲಿ ಮತ್ತು ಸಂಸ್ಥೆಯ ಸಿಬ್ಬಂದಿ ಹಾಗೂ ಆವರ್ತಕ ವೆಚ್ಚದ ವಿವರಗಳನ್ನು ಅನುಬಂಧ–ಬಿ ರಲ್ಲಿ ವಿವರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಶಮ್ಲಾ ಇಕ್ಬಾಲ್**
ನಿರ್ದೇಶಕರು (ಸ್ವಉಕಾ),
ಹಾಗೂ ಪದನಿಮಿತ್ತ ಸರ್ಕಾರದ ಉಪ ಕಾರ್ಯದರ್ಶಿ,
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ

**Details of machinery and office equipment**

**Annexure-I**

| Sl. No. | Particulars | Quantity | Approximate Amount Estimated |
|---|---|---|---|
| **I** | **High Speed Indl. Sewing M/c** | | |
| 1 | Single Needle Lock Stitch M/c | 30 | 450000 |
| | **Button Hole M/c** | 1 | 130000 |
| 2 | Button Stitch M/c | 1 | 80000 |
| 3 | Operator Stools | 32 | 20000 |
| 4 | Ironing Table with steam iron | 1 | 35000 |
| 5 | St. Knife cutting Machine | 1 | 50000 |
| 6 | Electrical Installation including KEB Deposit | | 200000 |
| | **Total** | | **965000** |

| II | Office Equipments | | |
|---|---|---|---|
| 1 | Office Furniture | | 15000 |
| 2 | Godrej Steel Cubboard | | 10000 |
| 3 | Godrej Slotted Angles | | 7500 |
| 4 | PM Tables | | 10000 |
| 5 | Notice Board | | 6000 |
| 6 | Dress forms | 4 | 40000 |
| 7 | Ceramic Green Board | | 10000 |
| 8 | Genset (20 KVA) | | 450000 |
| 9 | Miscellaneous | | 36500 |
| | **Total** | | **685000** |
| | **Grand Toral** | | **1550000** |

**Joint Director (SEP)**

**Annexure-II**

**Details of recurring expenditure**

| Sl. No. | No. of Posts | No. of Posts | Salary monty (Rs.) | Salary per month (Rs.) | Total salary per annum (Rs. in lakhs) |
|---|---|---|---|---|---|
| 1 | Instructor | 2 | 6000 | 6000 | 1.44 |
| 2 | Machine Mechanic | 1 | 3000 | 3000 | 0.36 |
| 3 | Data Entry Operator | 1 | 2500 | 2500 | 0.30 |
| 4 | Peon | 1 | 2000 | 2000 | 0.24 |
| 5 | Teaching Materials to students @ 250/- per student annum for 600 students | | | | 1.50 |
| 6 | Stationery & Miscellaneous expenses @ 10000/- per month for 12 months | | | | 1.20 |
| 7 | Operational expenses including maintenance of building, machinery, cost of utilities viz., power, diesel, water, telephone, postage etc., | | | | 3.00 |
| | **Total** | | | | **8.04** |

**Joint Director (SEP)**

P.R. 1152 RD & PR Dept.

**HEALTH AND FAMILY WELFARE SECRETARIAT**

**Subject:** Providing Comprehensive Emergency Response Services (Arogya Kavacha Scheme) in Karnataka State under Public Private Partnership through Emergency Management Research Institute (EMRI), Secunderabad.

**Read:**
1) Proposal from the Commissioner for Health and Family Welfare Services in single file system No. JD (M) TRCC/04/ 07-08 dated 27/10/2007.
2) Letter No. HFW 10 STQ 2007 dated 28/9/2007 from Additional Chief Secretary and Principal Secretary, Health & Family Welfare Department addressed to Chief Executive Officer, EMRI, Secunderabad.
3) Decision of the Cabinet vide Subject No: C/81/2008 Dated 7/8/2008.

**Preamble:**

Emergency is the occurrence of any sudden event that threatens life, health, property, order or daily life and demands immediate attention. This often requires coordinated response from multiple agencies like Police, Fire and Medical. It is an established fact that effective emergency response will significantly reduce deaths and disabilities suffering from length of hospital stay. In Karnataka also, road accidents have been increasing day by day. In road traffic accidents 33% pertains to pedestrians and

22% are from two wheelers. Especially road accidents are on the increasing trend in Bangalore Metropolitan City. Karnataka has crossed 10,000 deaths annually, of which 1000 deaths occur in Bangalore. In our State, the infrastructure facility available to deal with this kind of emergency service is very inadequate and that too in rural areas it is lacking. Further 40% of maternal deaths in the State are due to lack of timely transport facility.

In our neighboring State of Andhra Pradesh the above problem has been effectively dealt with by establishing Emergency Responsive system on a large scale in Public Private Partnership. Andhra Pradesh Government has signed up a Memorandum of Understanding with Emergency Management Research Institute (EMRI), Secunderabad, a private non-profit organization founded by Satyam Computers Services. The Governing Board of EMRI, Secunderabad consists of eminent personalities like (1) Dr. A.P.J. Abdul Kalam, Chairman Emeritus, EMRI, former President of India, (2) Sri B. Ramalinga Raju, Founder & Chairman, Satyam Computers Services, (3) Sri Rama Raju, MD, Satyam Computers, (4) Sri Rajath Gupta, former MD of McKinsey & Company worldwide, Chairman, Indian School of Business, (5) Sri K.V. Kamat, MD & CEO, ICICI Bank (6) Sri Tarun Das, Chief Mentor CII, (7) Dr. Raj Reddy, Carnegie Mellon University, (8) Dr. Krishna G Palepu, Senior Associate Dean for International Development, Harvard Business School, (9) Sri Kiran Karnic, former Chairman, NASSCOM, (10) Dr. Jayaprakash Narayanan, National Coordinator, Loksabha and (11) Sri Venkata Changavalli, CEO, EMRI.

Emergency Management and Research Institute is a non-profit organization established in April 2005 with an aim of providing comprehensive emergency response services (Medical, Police and Fire). It integrates many emergency resources and provides sustainable round the clock safety to citizens in a timely and effective manner through three contiguous sectors – SENSE (Communication and Dispatch – collects the facts about the emergency and assign the strategically located vehicle), REACH (Transport of vehicle to reach the site) and CARE (Providing the Pre-hospital care while transporting the patient/victim to the Hospital for stabilization. EMRI is professionally managed, has proven technology and software and offers an integrated total turnkey solution. It has been successfully operating in the Public Private Partnership model. EMRI was allotted a three-digit number 108 by the Government of India at the request of Government of Andhra Pradesh and made it toll-free across the State for all emergencies and can be accessed from land line and mobile line without prefixing area code. Apart from providing emergency management, EMRI conducts research related to emergencies and offers various emergency management-training programmes. EMRI has made progress in emergency research and training and offers a two year full time residential post graduate programme in emergency care and for fulfilling this purpose it has partnered with Stanford University, USA the world's leading Research and Teaching Institute. Every emergency call made on to number '108', either on Mobile or landline, be it an accident, snake bite, pregnancy case etc., would be attended to by the emergency team in the call center. That center would ensure that the ambulance (with paramedical staff and necessary modern equipments) reaches the spot and necessary pre-hospitalization care is rendered to stabilize the victim before the patient is shifted to the hospital. There are three types of ambulances – Advanced Life Support (ALS), Basic Life Support (BLS) and Life Support (LS). EMRI ambulances are designed keeping in view patient care, public safety and attendants comfort. The average time taken to reach the emergency spot is 14 minutes in Urban Areas and 21 minutes in Rural Areas. In case of Police & Fire emergencies, EMRI dispatches priority emergency through the concerned departments. EMRI is already in operation in the States of Andhra Pradesh, Gujarat and Uttarakhand and in some more States also EMRI is proposed to be established.

Hence, a proposal for providing Emergency Management Response System in Karnataka on Andhra Pradesh model has been under examination for some time. A team of officers led by the Commissioner for Health & Family Welfare had visited Andhra Pradesh and studied the prevailing system there. Later on, the Commissioner for Health & Family Welfare has sent a proposal to the Government vide letter read at (1) above suggesting to implement similar system in our State also. Further, on State's invitation Sri Venkat Changavalli, Chief Executive Officer, Emergency Management and Research

Institute, Secunderabad, had visited Karnataka and made presentation on 28-09-2007 in the presence of the Chief Secretary to Government of Karnataka wherein officers of various other departments had also participated. After having seen the presentation of the system, which is in operation in Andhra Pradesh, Chief Secretary had approved in principle that a similar system could be taken up in Karnataka also. Pursuant to this, expression of interest on behalf of Government of Karnataka was communicated for establishment of similar system in the State to Emergency Management and Research Institute of Andhra Pradesh vide letter read at (2) above.

Further, the then Additional Chief Secretary and Principal Secretary, Health & Family Welfare Department, Additional Chief Secretary and Principal Secretary, Home and Transport Department and Mission Director, NRHM had also visited Andhra Pradesh and studied the system prevalent there. Pursuant to communicating expression of interest, Emergency Management & Research Institute has communicated details of Project Report and copies of Memorandum of Understanding etc., to the State Government.

The Government of India has also proposed to develop in collaboration with the National Highway Authorities of India, Ministry of Road Transport and the concerned State Governments, a network of Trauma Centres along all National Highways. This network, in the first phase, would cover the entire Golden Quadrilateral connecting Delhi-Kolkatta-Chennai-Mumbai-Delhi and north-south-east-west corridors. Under these 8 centres in the State of Karnataka i.e., Bangalore, Tumkur, Sira, Chitradurga, Davangere, Haveri, Hubli and Belgaum have been selected for development of Trauma Care services. Further, presently 44 Trauma Care Centres are functioning in the State and under the 12th Finance Commission Funds, 170 Trauma Care Centres are being constructed. All these will be dovetailed while establishing Emergency Management Research Institution in our State.

Hon'ble Minister for Health & Family Welfare, Hon'ble Minister for Tourism & Infrastructure Development, Secretary to Government, HFW Department, Commissioner for Health and other officers had also visited Andhra Pradesh EMRI on 13th June 2008. During the visit EMRI made a presentation and has furnished detailed project proposals along with broad implementation plan indicating funding requirement etc. Based on the population of 5.29 crores as per 2001 census in Karnataka EMRI proposes to deploy 517 ambulances services under Emergency Management Response System in six phases commencing from November 2008 to March 2010. For this purpose, EMRI has estimated that a sum of Rs.221. 25 crores i.e. 87.07 crores towards capital expenditure and Rs.134.18 crores for operational expenditure would be required, the details of which are as follows:-

Rs. in crores

| Period | Capital Expenditure | Operational Expenditure | Total |
|---|---|---|---|
| August 2008 to March 2009 | ➢ 150 Ambulances<br>38 ALS @ Rs.18.40 lakhs 7.00<br>112 BLS @ Rs. 12.40 lakhs 13.88<br>➢ IT infrastructure 5.00<br>➢ Temporary ERC set up 2.50<br>**TOTAL 28.38** | 10.48 | **38.86** |
| April 2009 to March 2010 | ➢ 367 Ambulances<br>92 ALS @ 18.40 lakhs 16.93<br>275 BLS @ 12.40 lakhs 34.10<br>➢ Permanent ERC 7.56<br>➢ IT infrastructure 0.10<br>-------------<br>**TOTAL 58.69** | 48.29 | **106.98** |

| April 2010 to March 2011 | - | 75.41 | - |
|---|---|---|---|
| **TOTAL** | **87.07** | **134.18** | **221.25** |

The Hon'ble Chief Minister of Karnataka who is also the Finance Minister has announced in his Budget Speech 2008-09 that a new scheme called 'Arogya Kavacha' to provide Emergency Management Response Services to the people of Karnataka would be implemented from the current year under the Public Private Partnership. For this purpose a sum of Rs.10 crores has been provided in the current year's Budget. The Health & Family Welfare Department has proposed to utilise Rs.112 crores out of Rs.150 crores earmarked for establishment of Trauma Care Centres and other purposes in the State under the 12th Finance Commission Grants. The remaining amount of Rs.38 crores would be made use of to complete the on-going works under the 12th Finance Commission. The Empowered Committee headed by the Additional Chief Secretary it its meeting dated 12/5/2008 has approved to utilise the said Rs.112 crores for Arogya Kavacha Scheme. The Health & Family Welfare Department has also proposed to utilise funds available from the National Rural Health Mission for this Arogya Kavacha Scheme and the Executive Committee of the Karnataka State Health & Family Welfare Society has also approved the same. As per the implementation stage of this project, additional requirement from the State Budget will be less than Rs.5 crores during 2009-10 and around Rs.10 crores during 2010-11.

The responsibilities of Emergency Management and Research Institute, Secunderabad and the Department of Health & Family Welfare, Government of Karnataka are spelt out in the Memorandum of Understanding, which is enclosed at Annexure-I to this order.

The proposal of the Commissioner for Health & Family Welfare to establish Emergency Management System in the State on the model of Andhra Pradesh and also the details furnished by the Emergency Management Research Institute, Secunderabad have been examined in detail in consultation with Planning, Finance and Infrastructure Development Departments. The proposal was also placed before the Cabinet and the Cabinet at its meeting held on 7/8/2008 vide read at (3) above has approved to establish Emergency Management Response Services in the State under Public Private Partnership through Emergency Management Research Institute, Secunderabad.

Hence the following order.

**GOVERNMENT ORDER NO:HFW 10 STQ 2007, BANGALORE, DATED 11th AUGUST 2008**

In the circumstances explained in the preamble, Government are pleased to accord sanction for implementation of 'Arogya Kavacha Scheme' under the Public Private Partnership with Emergency Management Research Institute, (EMRI) Secunderabad by providing Comprehensive Emergency Management Response Services to the people of Karnataka. The following conditions are laid down for implementing this scheme: -

1. Emergency Management Research Institute, Secunderabad is declared as the Nodal Agency to implement Arogya Kavacha Scheme in Karnataka.
2. The total cost for implementation of this Scheme is Rs.221.25 crores (Rupees two hundred twenty one crores and twenty five lakhs only) from the period 2008-2009 to 2010-2011.
3. The Nodal Agency and the Health and Family Welfare Department, Government of Karnataka shall enter into a Memorandum of Understanding as per Annexure-1 enclosed to this Order. The Nodal Agency as well as Health and Family Welfare Department, Government of Karnataka, shall ensure successful implementation of the Scheme by strictly following the Memorandum of Understanding in letter and spirit.
4. The Nodal Agency shall set up the central facility for implementation of this Scheme temporarily at the Central Workshop Building of Health & Family Welfare Department, Magadi Road, Bangalore. Subsequently, the said central facility shall be shifted to the proposed permanent building to be constructed in the premises of Central Workshop of Health & Family Welfare Department, Magadi Road, Bangalore.

